# ಪಾಂಚಜನ್ಯ

ಕೆ. ವಿ. ಪುಟ್ಟಪ್ಪ





ಕರ್ಣಾಟಕ ಸಂಘ

ಶಿವಮೊಗ್ಗ

೧೯೩೩

# ಮುನ್ನುಡಿ

'ಇಂದುವದನೆ ಕುಂದರದನೆ ಪ್ರಕೃತಿ ರೂಪಸಿ' ಯಾಗಿ ತೋರಿದರೂ ಒಮ್ಮೊಮ್ಮೆ 'ರಕ್ತಸಖಿ ರಕ್ತಮುಖಿ ಪ್ರಕೃತಿ ರಾಕ್ಷಸಿ' ಯಾಗಿ ತೋರುತ್ತಾಳೆ. ಚೈತ್ರವನರಾಜಿಯನ್ನು ನೋಡಿದಾಗ ಪ್ರಕೃತಿಯು ರೂಪಸಿ ಎನ್ನಿಸುತ್ತದೆ. ದವಾಗ್ನಿಯನ್ನು ಕಂಡಾಗ ಆಕೆಯು ರಾಕ್ಷಸಿಯಂತೆ ಕಾಣುತ್ತಾಳೆ. ಕೆಂದುಟಿ, ಸೂಗೆನ್ನೆ, ಮುಗುಳುನಗೆ, ಮುಂಗುರುಳು, ಇನಿಗಣ್ಣುಗಳಿಂದ ಮನಮೋಹಿಸುವ ಮುದ್ದು ಮೊಗವನ್ನು ನೋಡಿದಾಗ ಪ್ರಕೃತಿಯು ಲಲಿತೆಯಾಗುತ್ತಾಳೆ. ಅಸ್ಥಿಪಂಜರವನ್ನು ಕಂಡಾಗ ಆಕೆಯು ರುದ್ರಳಾಗುತ್ತಾಳೆ. ಹಣ್ಣುಹಂಪಲುಗಳನ್ನು ತಿಂದು ಇಂಚರಗೈಯುವ ಗಿಳಿಕೋಗಿಲೆಗಳನ್ನು ನೋಡಿದರೆ ಪ್ರಕೃತಿಯು ಕೋಮಲೆಯಾಗಿ ತೋರುತ್ತಾಳೆ. ತುರುಶವಗಳನ್ನು ಕಿತ್ತುಕಿತ್ತು ತಿನ್ನುವ ವಜ್ರಚಂಚುವುಳ್ಳ ಗಿಡುಗ ರಣಹದ್ದುಗಳನ್ನು ನೋಡಿದರೆ ಪ್ರಕೃತಿಯು ಕಠೋರಳಾಗಿ ಕಾಣುತ್ತಾಳೆ. ಸೃಷ್ಟಿಯಲ್ಲಿ ರುದ್ರವೂ ರಮಣೀಯವೂ ಮಿಳಿತವಾಗಿವೆ. ಆದ್ದರಿಂದ ನಿಜವಾದ ಕಲಾವಿದನಿಗೆ ಸೌಂದರ್ಯದಂತೆ ರೌದ್ರವೂ ಆರಾಧನೆಯ ದೇವತೆಯೇ. ಯಾವುದನ್ನು ಬಿಟ್ಟು ಯಾವುದನ್ನು ಹಿಡಿದರೂ ಪೂರ್ಣ ಸತ್ಯವಾಗುವುದಿಲ್ಲ.

ಈ ಸಂಗ್ರಹದಲ್ಲಿರುವ ಕವನಗಳಲ್ಲಿ ಲಾಲಿತ್ಯಕಿಂತಲೂ ರೌದ್ರವೇ ಹೆಚ್ಚು ಪ್ರಧಾನವಾಗಿದೆ. ಲಾಲಿತ್ಯ ಬೇಕಾದವರು 'ಕೊಳಲು', 'ನವಿಲು' ಗಳಿಗೆ ಹೋಗಬೇಕು. ಕುರುಕ್ಷೇತ್ರದಲ್ಲಿ ಕೇಳಿಬರುವುದು ಶ್ರೀ ಕೃಷ್ಣನ ಪಾಂಚಜನ್ಯ! ಕೊಳಲ ದನಿಯನ್ನು ಆಲಿಸಬೇಕಾದರೆ ಹೋಗಬೇಕು ಬೃಂದಾವನಕ್ಕೆ!

ಈ ಕವನಗಳಲ್ಲಿ 'ಕಲ್ಕಿ', 'ಕುಮಾರವ್ಯಾಸ', 'ಪಾಂಚಜನ್ಯ', 'ಇಂದಿನ ದೇವರು', 'ಆತ್ಮಶ್ರದ್ಧೆ', 'ಶ್ರಾವಣ ಸಂಧ್ಯಾಸಮೀರಣ' ಮೊದಲಾದುವು ವಿಶ್ವಕರ್ಣಾಟಕ, ಪ್ರಬುದ್ಧಕರ್ಣಾಟಕ ಮೊದಲಾದ ಪತ್ರಿಕೆ ಮಾಸಪತ್ರಿಕೆಗಳಲ್ಲಿ ಅಚ್ಚಾಗಿವೆ. ಅದಕ್ಕಾಗಿ ಆ ಪತ್ರಿಕೆಗಳ

ಸಂಪಾದಕರಿಗೆ ನನ್ನ ವಂದನೆ. ಮುದ್ರಣ ಕಾರ್ಯದಲ್ಲಿ ನನಗೆ ನೆರವಾದ ಚಿರಂಜೀವಿ ದೇ. ನಾ. ಶ್ರೀನಿವಾಸ, ದೇ. ರಾ. ವಿಜಯದೇವ ಇವರಿಗೆ ನನ್ನ ಪ್ರೀತಿಯ ವಂದನೆ. ಶಿವಮೊಗ್ಗೆಯ ಕರ್ಣಾಟಕ ಸಂಘದಿಂದ ಇದನ್ನು ಅಚ್ಚುಹಾಕಿಸಲು ಕಾರಣರಾದ ಶ್ರೀಯುತ ದೇ. ರಾ. ಮಾನಪ್ಪ ನವರಿಗೂ, ಶ್ರೀಯುತ ಕೂಡಲಿ ಚಿದಂಬರಂ ರವರಿಗೂ ನನ್ನ ವಿಶ್ವಾಸ ಪೂರ್ವಕವಾದ ನಮಸ್ಕಾರ. ಗ್ರಂಥವನ್ನು ಅಚ್ಚುಕಟ್ಟಾಗಿ ಶೀಘ್ರದಲ್ಲಿಯೇ ಮುದ್ರಿಸಿರುವ ವೆಸ್ಲಿಪ್ರೆಸ್ಸಿನ ಅಧಿಕಾರಿಗಳಿಗೆ ನನ್ನ ಕೃತಜ್ಞತಾಪೂರ್ವಕ ವಾದ ವಂದನೆ.

ಮೈಸೂರು,
೧೬-೭-೧೯೩೩.

ಕೆ. ವಿ. ಪುಟ್ಟಪ್ಪ.

---

# ವಿಜ್ಞಾಪನೆ

ಶ್ರೀಮಾನ್ ಪುಟ್ಟಪ್ಪನವರ ಕವನಗಳ ಪ್ರಥಮ ಸಂಗ್ರಹವಾದ 'ಕೊಳಲು' ಹೊರಬಿದ್ದು ಮೂರು ವರುಷಗಳ ಮೇಲಾಯಿತು. ಅಂದಿ ನಿಂದವರ ಕವನಕಲೆಯು ಅನೇಕ ವಿಧದಲ್ಲಿ ಸತತವಾಗಿ ಬೆಳೆಯುತ್ತಿದೆ. ಆದರೂ—ದಿನದಿನವೂ ಹೊಸ ಬೆಳೆಯನ್ನು ಕಾಣುತ್ತಿರುವ ಇಂದಿನ ಕನ್ನಡ ಸಾಹಿತ್ಯಕ್ಷೇತ್ರದಲ್ಲಿ—ಅವರ ಕವನಗಳ ದ್ವಿತೀಯ ಸಂಗ್ರಹವೊಂದು ಇದುವರೆಗೂ ತೋರದಿದ್ದುದು ಸೋಜಿಗವು. ಈ ಸಂದರ್ಭದಲ್ಲಿ 'ಪಾಂಚ ಜನ್ಯ' ವೆಂಬ ಈ ಕವನ ಮಾಲೆಯನ್ನು ಕನ್ನಡಿಗರಲ್ಲಿ ಅರ್ಪಿಸಲು ನಮಗೆ ತುಂಬ ಸಂತೋಷವಾಗುತ್ತದೆ. ಕನ್ನಡಿಗರು ಈ ಕೃತಿ ಸಂಗ್ರಹವನ್ನು ಆತ್ಮಾದರದಿಂದ ಬರಮಾಡಿಕೊಳ್ಳುವರೆಂಬುದರಲ್ಲಿ ನಮಗೆ ಯಾವ ಸಂದೇ ಹವೂ ಇಲ್ಲ. ಈ ಅವಕಾಶವನ್ನು ಕಲ್ಪಿಸಿಕೊಟ್ಟುದಕ್ಕಾಗಿ ಸಂಘವು ಶ್ರೀಮಾನ್ ಪುಟ್ಟಪ್ಪನವರಿಗೆ ಚಿರ ಋಣಿಯಾಗಿರುವುದು.

ರಕ್ಷಾಕವಚದ ಮೇಲೆ ತೋರುವ ಉತ್ಕೃಷ್ಟವಾದ ಚಿತ್ರವನ್ನು ರಚಿಸಿಕೊಟ್ಟುದಕ್ಕಾಗಿ ಶ್ರೀಯುತ 'ಆನಂದ' ರಿಗೆ ನಾವು ಕೃತಜ್ಞರು.

ಶಿವಮೊಗ್ಗ,
ಶ್ರೀಮುಖ ಸಂ| ದ ಶ್ರಾವಣ ಶುದ್ಧ ಪಂಚಮಿ.

ಕೂಡಲಿ ಚಿದಂಬರಂ,
ಕಾರ್ಯದರ್ಶಿ, ಕರ್ಣಾಟಕ ಸಂಘ.

# ವಿವರ

## ಈ ಲೇಖಕರ ಇತರ ಕೃತಿಗಳು

ಬೊಮ್ಮನಹಳ್ಳಿಯ ಕಿಂದರಿ ಜೋಗಿ (ಕವನ)

ಎರಡು ನಾಟಕಗಳು—

ಯಮನ ಸೋಲು ;
ಬಿರುಗಾಳಿ.

ಕೊಳಲು (ಕವನ ಸಂಗ್ರಹ)

ನನ್ನ ಗೋಪಾಲ (ದೃಶ್ಯ)

ಸಾಹಿತ್ಯ ಪ್ರಚಾರ (ಭಾಷಣ)

ಹಾಳೂರು (ಕವನ)

ಮೂರು ನಾಟಕಗಳು—

ಮಹಾರಾತ್ರಿ ;
ಶ್ಮಶಾನ ಕುರುಕ್ಷೇತ್ರಂ ;
ಜಲಗಾರ.

ವಾಲ್ಮೀಕಿಯ ಭಾಗ್ಯ (ದೃಶ್ಯ)

ಸ್ವಾಮಿ ವಿವೇಕಾನಂದ (ಜೀವನ ಚರಿತೆ)

ರಕ್ತಾಕ್ಷಿ (ಐತಿಹಾಸಿಕ ದೃಶ್ಯ)

ವಿವೇಕವಾಣಿ (ಗದ್ಯಪದ್ಯ ಸಂಗ್ರಹ)

ನವಿಲು (ಕವನ ಸಂಗ್ರಹ)

# ಪಾಂಚಜನ್ಯ

ನಡೆ ಮುಂದೆ, ನಡೆ ಮುಂದೆ,
  ನುಗ್ಗಿ ನಡೆ, ಮುಂದೆ!
ಜಗ್ಗದೆಯೆ, ಕುಗ್ಗದೆಯೆ,
  ಹಿಗ್ಗಿ ನಡೆ ಮುಂದೆ!

ಬಿಟ್ಟ ಬಿಡು, ನೆಟ್ಟ ನೆಡು
ಕೆಟ್ಟೆದೆಯ ಗುಡಿಯಲ್ಲಿ;
ಸೆರೆಯ ಹುರಿ, ಅರಿಯ ಸಿರಿ,
ಹುಟ್ಟಳಿಸು ಹುಡಿಯಲ್ಲಿ!
ನಾನಳಿವೆ, ನೀನಳಿವೆ,
ನಮ್ಮೆಲುಬುಗಳ ಮೇಲೆ
ಮೂಡುವುದು, ಮೂಡುವುದು
ನವಭಾರತದ ಲೀಲೆ!
ನೊಂದ ದನಿ, ಕಣ್ಣ ಹನಿ,
ಬರಿದೆ ಎಂದೊರೆಯದಿರು!
ತೆತ್ತ ಹಣ, ಸತ್ತ ಹೆಣ,
ಹೋಯ್ತೆಂದು ಮೊರೆಯದಿರು!
ಪೊಡವಿಯೊಳಗಡಗಿರುವ
ತಳಹದಿಯ ತೆಗಳುವರೆ?
ಮೆರೆಯುತಿರುವರಮನೆಯ
ಸಿರಿಯೊಂದ ಹೊಗಳುವರೆ?
ಎಲ್ಲಿ ಇದೆ, ಎಲ್ಲಿ ಇದೆ,
ನಿತ್ಯತೆಯ ಗಬ್ಬದಲಿ;

## ಪಾಂಚಜನ್ಯ

ಮುಂದೆಯದು ತೋರುವುದು
ಬಿಡುಗಡೆಯ ಹಬ್ಬದಲಿ!
ನೆಚ್ಚುಗೆಡಬೇಡ ನಡೆ,
ಕೆಚ್ಚೆದೆಯ ಕಲಿಯೆ!
ಬೆಚ್ಚಿದರೆ, ಬೆದರಿದರೆ,
ಕಾಳಿಗದು ಒಲಿಯೆ?

ಭರತಖಂಡದ ಹಿತವೆ
ನನ್ನ ಹಿತ ಎಂದು,
ಭರತಮಾತೆಯ ಮತವೆ
ನನ್ನ ಮತ ಎಂದು,
ಭಾರತಾಂಬೆಯ ಸುತರೆ
ಸೋದರರು ಎಂದು,
ಭಾರತಾಂಬೆಯ ಮುಕ್ತಿ
ಮುಕ್ತಿ ನನಗೆಂದು,
ನುಗ್ಗು ಮುಂದಕೆ, ಧೀರ,
ಕಾಳಗದ ಕೊಲೆಗೆ!
ನುಗ್ಗು ಮರಣಕೆ, ವೀರ,
ಸಗ್ಗದಾ ನೆಲೆಗೆ!

ನೋಡದೋ, ನೋಡಲ್ಲಿ,
ದರ್ಪರಥದಡಿಯಲ್ಲಿ
ಹೊರಳುತಿರುವಳು ತಾಯಿ
ನೆತ್ತರಿನ ಪುಡಿಯಲ್ಲಿ!
ಬಾಳಸೊರೆಯಿಂದ ಹಿರಿ!
ನುಗ್ಗು, ನಡೆ, ಕಟ್ಟು ಹರಿ!
ತಡೆಯೆ ಬಂದವರ ಇರಿ!
ಒಲಿಯುವಳು ಜಯದ ಸಿರಿ!

ಪಾಂಚಜನ್ಯ

ಜನ್ಮ ಪೊಂದಳಿದರೇಂ ?
ಸೂರೆಹವು ಬಲಿಗೆ !
ಕಾಳಗದೊಳಳಿಯಲೇಂ ?
ಸಾವೆ ಸಿರಿ ಕಲಿಗೆ !

ನಿಂತೇನು ನೋಡುತಿಹೆ ?
ಹುದುಗುವರೆ ಇಲ್ಲಿ ?
ಮಸಣವಾಗಲಿ ಪಡೆಯು
ರಣರಂಗದಲ್ಲಿ !
ನೆತ್ತರನು ನೋಡುವೆಯ ?
ಸತ್ತವರ ನೋಡುವೆಯ ?
ಕಂಕಾಲಗಳ ಗೂಡೆ ?
ಮರುಳುಗಳ ನೆಲೆವೀಡೆ ?
ಕಾಳಿಯುಳುಕುವಳೇನು
ರಕ್ಕಸರ ಬಲಿಗೆ ?
ಸಮರ ರಂಗದ ನಡುವೆ
ಹೆದರಿಕೆಯೆ ಕಲಿಗೆ ?
ಹಾ, ನೋವು ! ಹಾ, ನೋವು !
ಎಂದೆಲ್ಲ ಕೂಗುವರೆ ?
ಹಾ ನೀರು ! ಹಾ ನೀರು !
ಎಂದಸುವ ನೀಗುವರೆ ?
ಕೂಗಿಗೆದೆಗರಗದಿರು !
ಜೀನಿಯಿರೆ ಮರುಗದಿರು !
ಕಂಬನಿಯ ಕರೆಯದಿರು,
ಗುರಿಯ ಮರೆಯದಿರು ;
ಕಲಿಯೆ, ಹಿಂಜರಿಯದಿರು,
ತಾಯ ತೊರೆಯದಿರು !
ಎಲುಬುಗಳ ತೊಲೆಗಳಲಿ,

ಮಾಂಸದಾ ಮಣ್ಣಿನಲಿ,
ನೆತ್ತರಿನ ನೀರಿನಲಿ,
ಬೇನೆ, ಬಿಸುಸುಯ್ಲಿನಲಿ,
ಬಿಡುಗಡೆಯ ಸಿರಿಗುಡಿಯ
  ಮಸಣದಲಿ ಕಟ್ಟು!
ಪಾವನದ ತಾಯುಡಿಯ
  ಒಲ್ಮೆಯಲಿ ಮುಟ್ಟು!
ಆತ್ಮ ವಚ್ಯುತವೆಂದು,
ಜನ್ಮಗಳು ಬಹುವೆಂದು,
ಮೃತ್ಯು ನಶ್ವರವೆಂದು,
ಭಾರತಿಗೆ ಜಯ ಎಂದು,
ನಡೆ ಮುಂದೆ, ನಡೆ ಮುಂದೆ,
  ನುಗ್ಗಿ ನಡೆ, ಮುಂದೆ!
ಜಗ್ಗದೆಯೆ, ಕುಗ್ಗದೆಯೆ,
  ಹಿಗ್ಗಿ ನಡೆ, ಮುಂದೆ!

# ಕಾಳಿ ಬರುವಳು

ನೋಡು, ಬರುತಲಿರುವಳದೋ
ರುದ್ರ ಭದ್ರ ಕಾಳಿಯು!
ದೇವಿ, ಚಂಡಿ, ಚಾಮುಂಡಿ,
ರಕ್ತ ರುಂಡಮಾಲಿಯು!
ಡಮ ಡಮ ಡಮ ಡೋಲು ಬಡಿ!
ಭಂ ಭಂ ಭಂ ಕಾಕು ನುಡಿ!
ಧಿಮಿ ಧಿಮಿ ಧಿಮಿ ಎಂದು ಕುಣಿ!
ಜಯ ಜಯ ಜಯ ಎಂದು ಮಣಿ!
ನೋಡು, ಬರುತಲಿರುವಳದೋ
ರುದ್ರ ಭದ್ರ ಕಾಳಿಯು!
ದೇವಿ, ಚಂಡಿ, ಚಾಮುಂಡಿ,
ರಕ್ತ ರುಂಡಮಾಲಿಯು!

ವ್ಯೋಮವೊಂದು ಕೈಯ ತಾಳ,
ಭೂಮಿಯೊಂದು ಕೈಯ ತಾಳ,
ಬಡಿದು ಬಡಿದು ಬರುವಳು!
ಜನನ ಒಂದು ಅಡಿಯ ಹೆಜ್ಜೆ!
ಮರಣ ಒಂದು ಅಡಿಯ ಹೆಜ್ಜೆ!
ಕುಣಿದು ಕುಣಿದು ಬರುವಳು!
ಮಿಂಚನೊಂದು ಕೈಲಿ ಹಿಡಿದು,
ಸಿಡಿಲನೊಂದು ಕೈಲಿ ಹಿಡಿದು,
ಬಾನ ಡೋಳ ಬಡಿಯುತ
ಮನವನೊಮ್ಮೆ ಮೆಟ್ಟಿ ತುಳಿದು
ಎದೆಯನೊಮ್ಮೆ ಮೆಟ್ಟಿ ನಲಿದು

ಕಿವಿದೆರೆಯನು ಒಡೆಯುತ!
ನೋಡು, ಬರುತಲಿರುವಳದೋ
ರುದ್ರ ಭದ್ರ ಕಾಳಿಯು!
ದೇವಿ, ಚಂಡಿ, ಚಾಮುಂಡಿ,
ರಕ್ತ ರುಂಡಮಾಲಿಯು!

ಒಂದು ಅಡಿಯ ನಿಟ್ಟು ತೆಗೆಯೆ,
ಶ್ಮಶಾನ ಮೆರೆವುದು!
ಮತ್ತೊಂದು ಅಡಿಯನಿಟ್ಟು ತೆಗೆಯೆ,
ಉದ್ಯಾನ ನಲಿವುದು!
ದೇಶವೊಂದುಕ್ಕೈಯ ಖಡ್ಗ
ಬಡಿ ಬಡಿದು ಬರುವಳು;
ಕಾಲವೊಂದುಕ್ಕೈಯ ಖಡ್ಗ
ಕಡಿ ಕಡಿದು ಬರುವಳು!
ಹೊಳೆ ಹೊಳೆಯುವ ಕಣ್ಗಳಿಂದ
ಕಾರ್ಮಿಂಚ ಕಾರುತ,
ಗುಡು ಗುಡುಗುವ ಕಂಠದಿಂದ
ಕಾರ್ಮೊಳಗ ಬೀರುತ,
ಜ್ವಾಲಾಮುಖಿಯ ರುದ್ರಶಿಖಿಯ
ಕೈಲಿ ಹಿಡಿದು ಬರುವಳು;
ಹಿರಿಯ ಇರುಳ ಕರಿಯ ತಿರುಳ
ಮೈಲಿ ಮುಡಿದು ಬರುವಳು;
ಕಡಲ ವಾಣಿಯವಳ ವಾಣಿ,
ಕೂಗಿ ರೇಗಿ ಬರುವಳು;
ಕೃಷ್ಣಮೇಘ ಸದೃಶವೇಣಿ
ತೂರಿ ಬೀರಿ ಬರುವಳು!
ಪ್ರಳಯದಿಂ ಸೃಷ್ಟಿಯನು
ಮೇಲೆತ್ತಿ ಬರುವಳು;

## ಕಾಳಿ ಬರುವಳು

ಪ್ರಳಯದಲಿ ಸೃಷ್ಟಿಯನು
ಕೆಳಗೊತ್ತಿ ಬರುವಳು!
ಅವ್ಯಕ್ತ ಬ್ರಹ್ಮದೆದೆಯ ಮೇಲೆ
ಕುಣಿದಾಡಿ ಬರುವಳು!
ವ್ಯಕ್ತ ಬ್ರಹ್ಮವೆನ್ನ ಲೀಲೆ
ಎನುತೋಡಿ ಬರುವಳು!
ವಿಜಯ ರಣೋನ್ಮತ್ತೆಯಾಗಿ
ಬರುವಳಾದಿ ಮಾಯೆಯು;
ಮಕ್ಕಳೆದೆಯ ಅಳಲನೀಗಿ
ಬರುವಳದೋ ತಾಯಿಯು!
ನೋಡು, ಬರುತಲಿರುವಳದೋ
ರುದ್ರ ಭದ್ರ ಕಾಳಿಯು;
ದೇವಿ, ಚಂಡಿ, ಚಾಮುಂಡಿ,
ರಕ್ತ ರುಂಡಮಾಲಿಯು.

# ಕುಮಾರ ವ್ಯಾಸ

ಕುಮಾರ ವ್ಯಾಸನು ಹಾಡಿದನೆಂದರೆ,
ಕಲಿಯುಗ ದ್ವಾಪರವಾಗುವುದು!
ಭಾರತ ಕಣ್ಣಲಿ ಕುಣಿವುದು; ಮೈಯ್ಯಲಿ
ಮಿಂಚಿನ ಹೊಳೆ ತುಳುಕಾಡುವುದು!

ಆ ಕುರುಭೂಮಿಯು ತೋರುವುದು;
ಆ ರಣರಂಗದಲಿ,
ಆ ಸಂಗ್ರಾಮದಲಿ,
ಪಟುಭಟರಾರ್ಭಟ ಕೇಳುವುದು!
ಮೈ ನವಿರೇಳುವುದು!
ಹೊಳೆಯುವ ಕೈದುಗಳಾಟದಲಿ,
ಕಲಿಗಳ ಕದನದ ಕೂಟದಲಿ,
ತಾಗುವ ಗದೆಗಳ ಸಂಘಟ್ಟಣೆಯಲಿ,
ರಥ ಚಕ್ರಧ್ವನಿ ಚೀತ್ಕಾರದಲಿ,
ಸಾಯ್ವರ ಶಾಪದಲಿ,
ಬೀಳ್ವರ ತಾಪದಲಿ,
ನಸುಸೋತಿರುವರ ಕೋಪದಲಿ,
ನೆರೆಗೆದ್ದಿಹರಾಟೋಪದಲಿ,
ನುಗ್ಗುವ ಸೈನ್ಯದ ಹಾಹಾರವದಲಿ,
ಕೆನೆಯುವ ಹಯಗಳ ಹೇಷಾರವದಲಿ,
ಕಿವಿ ಬಿರಿಯುವುದು!
ಎದೆ ಮುರಿಯುವುದು!
ಬಸಿಯುವ ಮಜ್ಜೆಯ ಪಂಕದೊಳೂಡಿ
ಚಿಮ್ಮುವ ರಕ್ತದ ಬುಗ್ಗೆಯು ನೋಡಿ

ಕುಮಾರ ವ್ಯಾಸ

ಕಣ್ಣೊಡೆಯುವುದು!
ಮೈ ನಡುಗುವುದು!

ಕೇಳಿರಿ! ಪಾರ್ಥನ ಸಾರಥಿಯು
ರಣ ಗೀತೆಯನು,
ರಣ ನೀತಿಯನು,
ಬೋಧಿಸುವನು ನಿರ್ಭೀತಿಯನು!
ಕುರು ರಂಗದ ಶರಶಯ್ಯೆಯಲಿ
ಭೀಷ್ಮನು ಮಲಗಿಹನು!
ಕಣೆಗಳ ಬಣಬೆಯ ಪಂಜರದಲಿ
ದ್ರೋಣನು ಬಿದ್ದಿಹನು!
ನೆತ್ತರವೀಂಟುತಲಿರುವನು ಭೀಮನು
ಅಯ್ಯೋ, ನೋಡಲ್ಲಿ!
ರಥದಿಂದುರುಳುತಲಿರುವನು ಕರ್ಣನು,
ಹಾ! ಹಾ! ನೋಡಿಲ್ಲಿ!
ರಣ ಚಂಡಿಯು ಆ ಬೆಂಕಿಯ ಮಗಳು
ಹೆಣ್ಣಿನ ರೂಪದ ಬಿರುಸಿಡಿಲವಳು!
ಮುಗುಳ್ನಗೆ ಬೀರುತ ನೋಡಲ್ಲಿ
ನಿಂತಿರುವಳು ರಣರಂಗದಲಿ
ದ್ರೌಪದಿ ಮುಡಿಗೆದರಿ!

ವೈಶಂಪಾಯನ ಸರಸಿಯ ತೀರದಿ
ತೋರುವರಾರಲ್ಲಿ?
ಕೌರವದೇವನು ಸಿಡಿಲಾಗಿರುವನು
ಭೀಮನ ಸವಿಸದಲಿ!
ವೈರಿಯ ಎದೆಯನು
ಒಡೆಯುವ ಗದೆಯನು
ಮೇಲೆತ್ತಿರುವನು ನೋಡಲ್ಲಿ!

ಭೀಮನು ಬಿದ್ದನೆ!
ಕೌರವ ಗೆದ್ದನೆ!
ಮುಂದಾಗುವುದನು ಕಾಣಲ್ಲಿ!
ಇದಾವ ನ್ಯಾಯ!
ಏನನ್ಯಾಯ!
ಕೃಷ್ಣನ ಕುಹಕವ ನೋಡಲ್ಲಿ!
ಏನನು ನೋಡುವೆ? ತಡೆಯುವೆ ಏಕೆ?
ಕೌರವರಾಯನು ಮಡಿಯಲೆ ಬೇಕೆ?
ಯುವಕನೆ ತುಡುಕು ಕಠಾರಿಯನು!
ಹೊಡೆ, ರಣಭೇರಿಯನು!
ನಡೆ, ನಡೆ! ಊದು ತುತೂರಿಯನು!
ಕರೆ, ರಣಮಾರಿಯನು!

ಕುಮಾರ ವ್ಯಾಸನು ಹಾಡಿದನೆಂದರೆ,
ಕಲಿಯುಗ ದ್ವಾಪರವಾಗುವುದು!
ಭಾರತ ಕಣ್ಣಲಿ ಕುಣಿವುದು, ಮೆಯ್ಯಲಿ
ಮಿಂಚಿನ ಹೊಳೆ ತುಳುಕಾಡುವುದು!
ಕಲಿ ಕೆಚ್ಚಾಗುವನು!
ಕವಿ ಮುಚ್ಚಾಗುವನು!

# ವಿಪ್ಲವ ಮೂರ್ತಿ

ಪ್ರಳಯದ ವಿಪ್ಲವ ಮೂರ್ತಿಯು ನಾನು,
ಕಾಳಿಯು ನಾನು,
ರುದ್ರನು ನಾನು,
ತಾಂಡವಗೈಯುವ ಭೈರವ ನಾನು!
ಬ್ರೊಮ್ಮವನೊಡೆಯುವ ಬರಸಿಡಿಲಾನು,
ಕರ್ಮ್ಮಗಿಲೊಗೆಯುವ ಕಾರ್ಮ್ಮಿಂಚಾನು;
ಹೆಣ್ಣೊರಲಿಂಚರ ನಾನು,
ಕಣ್ಮಿಂಚಾನು!
ಮಸಣದ ಸೂಡಿನ ಬೆಂಕಿಯು ನಾನು,
ಮೃತ್ಯುವು ನಾನು,
ಮೃತ್ಯುಂಜಯ ನಾನು!
ರುದ್ರನ ತಲೆಯಲಿ ಚಂದ್ರನು ನಾನು,
ಗಂಗೆಯು ನಾನು,
ಕೇಸುರಿಗಣ್ಣಾನು!
ಸಿಡಿಲಿನ ಗಂಡನು ನಾನು!
ಮಿಂಚಿನ ಮಿಂಡನು ನಾನು!
ಹೆಣ್ಗಳ ಮೊಗದ ಮುಗುಳ್ನಗೆ ನಾನು,
ಕೆನ್ನೆಯ ಕೆಂಪಾನು,
ಕಣ್ಗಳ ಸೊಂಪಾನು,
ಅವರನಿಗೊರಲಿನ ಬೀಣೆಯು ನಾನು!
ಮಸಣದ ದೆವ್ವದ ಚೀರುಲಿ ನಾನು
ಸಿಡಿಮದ್ದಿನ ಪೇರುಂಡೆಯು ನಾನು;
ಸಿಡಿವ ಫಿರಂಗಿಯು ನಾನು,
ಸಿಡಿಲಿನ ಪುಡಿ ನಾನು,
ಮಿಂಚಿನ ಕಿಡಿ ನಾನು!
ಹಾವಿನ ಬಾಯಲಿ ವಿಷ ನಾನು!

ಪಾಂಚಜನ್ಯ

ತಾಯಿಯರೆದೆಯಲಿ ಹಾಲಾನು !
ಕೌರವ ನಾನು,
ಕೌರವನೆದೆಯಲಿ ಕೆಚ್ಚಾನು ;
ಮೇಣವನೆತ್ತಿದ ಬಲ್ಗದೆ ನಾನು !
ರಾವಣ ನಾನು,
ರಾವಣನೊಲ್ಮೆಯ ಕಿಚ್ಚಾನು,
ಮೇಣವನುರದಲಿ ಶಕ್ತಿಯು ನಾನು !
ಉನ್ಮತ್ತನು ನಾನು,
ಸ್ಥಿರ ಚಿತ್ತನು ನಾನು !
ಬೆಂಗದಿರನ ಬಿಸಿ ನಾನು,
ತಣ್ಗದಿರನ ತಂಪಾನು !
ಈಶ್ವರ ಶಿರದಲಿ ಸೃಷ್ಟಿಯ ಕೆರಳಿಪ
ರಾಮರಸಾಯನ ನಾನು !
ಹುಡುಗಿಯರೆದೆಯಲಿ ತುಂಬಿತುಳುಕುತಿಹ
ಜೇಟದ ಕಿಚ್ಚಾನು !
ನಲ್ಮೆಯ ಹುಚ್ಚಾನು !
ಬಸಗಿಳಿ ನಾನು,
ಕೋಗಿಲೆ ನಾನು,
ಬಣ್ಣದ ಮಳೆಬಿಲ್ಲಾನು,
ಚೆಲುವೆಯರುಡೆಗಳ ಚೆಲುವಂಚಾನು !
ಕೋವಿಯು ನಾನು,
ಸಿಡಿಗುಂಡಾನು,
ವೀರನ ಖಡ್ಗವು ನಾನು,
ಹರಿಯುವ ರಕ್ತದ ವಾಹಿನಿ ನಾನು !
ಲೋಹಿತ ವಿಪ್ಲವದುರಿ ನಾನು !
ಅವ್ಯಕ್ತ ಬ್ರಹ್ಮವು ನಾನು ;
ವ್ಯಕ್ತ ಬ್ರಹ್ಮವು ನಾನು,
ಮಾಯೆಯು ನಾನು,

## ವಿಪ್ಲವ ಮೂರ್ತಿ

ಮಾಯಾತೀತನು ನಾನು,
ಕಾಲವು ನಾನು,
ದೇಶವು ನಾನು,
ನಿರ್ಗುಣಿ ನಾನು,
ಸೃಷ್ಟಿಸ್ಥಿತಿಲಯವೆಲ್ಲವು ನಾನು !
ಪರಶಿವ ನಾನು,
ಶ್ರೀಹರಿ ನಾನು !
ಕಾಫಿಯು ನಾನು,
ತಿಂಡಿಯು ನಾನು !
ಹುಚ್ಚಾ ನು !
ಅಂಬರ ಚುಂಬಿತ ಶುಭ್ರ ಹಿಮಾವೃತ
ದಿವ್ಯ ಹಿಮಾಲಯ ನಾನು !
ಮಿಂಚಿನ ಕಡಲನು ಕಡೆಯಲು ಮೂಡಿದ
ಸಿಡಿಲಿನ ಸಿಂಹವು ನಾನು !
ಕನ್ನಡ ನಾನು,
ಸಾಗರ ನಾನು,
ಕುಲ ಪರ್ವತ ನಾನು,
ಶ್ರೀ ಕೃಷ್ಣನ ಚಕ್ರವು ನಾನು !
ನಿದ್ದೆಯು ನಾನು !
ಹುಚ್ಚಿನ ಮುದ್ದೆಯು ನಾನು !
ಪಾಪವು ನಾನು,
ನರಕವು ನಾನು,
ವೈಕುಂಠವು ನಾನು
ಸ್ವರ್ಗವು ನಾನು !
ತಾಂಡವಗೈಯುವ ಭೈರವ ನಾನು,
ಕಾಳಿಯು ನಾನು,
ರುದ್ರನು ನಾನು,
ವಿಲಯದ ವಿಪ್ಲವ ಮೂರ್ತಿಯು ನಾನು.

# ಭೈರವನಾರಿ

ಕುಣಿಯುವಳಾರೀ ಭೈರವನಾರಿ
ರಣ ರಂಗದಲಿ ರೌದ್ರವ ತೋರಿ.

ಕಣ್ಣುಗಳಿಂದಂ ಕಿಡಿಗಳ ಕಾರಿ,
ದೆಸೆದೆಸೆದೆಸೆಗೆ ಜಡೆಯನು ಜಾರಿ,
ಕೆನ್ನಾಲಗೆಯಿಂ ರಕ್ತವ ಸೋರಿ,
ಹುಚ್ಚಳವೋಲುನ್ಮತ್ತತೆ ವಿಾರಿ ;

ಕಂಠದೊಳಂಜಿಪ ನರಶಿರಮಾಲೆ !
ಕರದಲಿ ರಂಜಿಪ ರುಕ್ಷ ಜ್ವಾಲೆ !
ಏನಿದು ಕಾಳಿಯ ತಾಂಡವ ಲೀಲೆ ?
ತೂಗುತಲಿದೆ ವಿಶ್ವದ ಉಯ್ಯಾಲೆ !

ಭ್ರೂಭಂಗದಲಿ ಕೋಟ್ಯನು ಕೋಟಿ
ರಾಕ್ಷಸವೃಂದವ ಮುರಿಮುರಿದೊಟ್ಟಿ,
ಶ್ಯಾಮೆಯು ನಗ್ನ ಭಯಂಕರಿಯಾಗಿ
ತಾಂಡವಗೈವಳು ಶಂಕರ, ಕೂಗಿ !

ನರ್ತನದಿಂ ನವಶಕ್ತಿಯು ಹೊಮ್ಮಿ,
ಸೃಷ್ಟಿ ಸ್ಥಿತಿ ಲಯ ಚಕ್ರಂ ಚಿಮ್ಮಿ,
ಜಡ ಚೇತನ ರೂಪುಗಳಾಗೊಡೆದು
ತೋರ್ವುದು ಸುಖದುಃಖಗಳನು ಪಡೆದು.

# ಸತ್ಯಾಗ್ರಹಿ

ಸ್ವಾತಂತ್ರ್ಯ ಸಂಗ್ರಾಮದಲಿ ತನ್ನ ಜೀವವನು
ಲೆಕ್ಕಿಸದೆ ತೋರುವನು ವೀರ ಸತ್ಯಾಗ್ರಹಿಯು;
ನೊಂದರೂ, ಬೆಂದರೂ, ಸತ್ಯವನು ಕೈಬಿಡದೆ
ಜನನ ದಾಡೆಯ ನುಗ್ಗುವವನು ಸತ್ಯಾಗ್ರಹಿಯು!
ಆತ್ಮ ಶಕ್ತಿಯ ಬಲದಿ ಮಿಂಚುಗಳ ಸಂತೈಸಿ
ಸಿಡಿಲುಗಳ ಬೋಳೈಸುವವನು ಸತ್ಯಾಗ್ರಹಿಯು;
ಹೊಡೆಯದೆಯೆ ತಡೆಯುವವನು ವೀರ ಸತ್ಯಾಗ್ರಹಿಯು!
ಗೆಲ್ಲದೆಯೆ ಗೆಲ್ಲುವನು ವೀರ ಸತ್ಯಾಗ್ರಹಿಯು!
ಸಿಡಿಗುಂಡಿನೆದುರಿನಲಿ, ಕೂರಸಿಗಳೆದುರಿನಲಿ,
ಕಷ್ಟಣದ ಸಂಕೋಲೆಗಳ ಕರಿಯ ತೆಕ್ಕೆಯಲಿ,
ಜೈಲಿನಲಿ, ಅಧಿಕಾರಿಗಳ ಕ್ರೂರದರ್ಪದಲಿ,
ಹರಿವೆದೆಯ ನೆತ್ತರಿನ ಹೊಳೆಯಲ್ಲಿ, ಮುಂದಿಟ್ಟ
ಕಾಲ ಹಿಂದೆಗೆಯದಳಿವವನು ಸತ್ಯಾಗ್ರಹಿಯು!
ದೇಶವಾತೆಯ ಸುಖಕೆ ತನ್ನ ಸುಖವನು ಬೀಳ್ವ,
ದೇಶದ ಬದುಕಿಗಾಗಿ ತನ್ನ ಬದುಕನು ಸೀಳ್ವ,
ಹಿಂಸೆಯನಹಿಂಸೆಯಿಂ ಹಿಂಸಿಸಿಯೆ ಕೊಲ್ವ,
ಸಮರ ಲೋಲನೆ ನಮ್ಮ ವೀರ ಸತ್ಯಾಗ್ರಹಿಯು!
ಪ್ರೇಮಾಗ್ನಿಯಿಂ ದ್ವೇಷದಗ್ನಿಯನು ಸುಟ್ಟು,
ದೇಹಶಕ್ತಿಯನಾತ್ಮಶಕ್ತಿಯಿಂ ಗೆದ್ದು,
ಬಗೆಯಲ್ಲಿ, ಬಾಯಲ್ಲಿ, ಕೈಯಲ್ಲಿ ಹಿಂಸೆಯನು
ಬಿಟ್ಟು ತೋರುವ ಭಟನು ವೀರ ಸತ್ಯಾಗ್ರಹಿಯು!
ಹೇಳದೆಯೆ ಕೇಳದೆಯೆ ದಳಪತಿಯು ನುಡಿದಂತೆ
ಮಾಡುವವನಾವನೋ ಅವನೆ ಸತ್ಯಾಗ್ರಹಿಯು;

ಕೋಪಿಸದೆ ಶತ್ರುವಿನ ರಭಸವಹ ಕೋಪವನು
ಸಹನೆಯಿಂ ಗೆಲ್ಲುವ ಪರಾಕ್ರಮಿಯು ; ಬಲವಿರಲು
ಬಲುಮೆಯನು ತೋರದನು ದಿವ್ಯ ಸತ್ಯಾಗ್ರಹಿಯು !
ತನ್ನ ತಾಯಿಯ ಉಪ್ಪು ತನ್ನ ವಶದಲ್ಲಿರಲು
ಇತರರನು ನೋಯಿಸದೆ ತನ್ನ ಜೀವವ ತೆತ್ತು
ಕಾಯುವವನಾವನೋ ಅವನೆ ಸತ್ಯಾಗ್ರಹಿಯು !
ಎಂದಿಗೂ ಆಣೆಯಿಡದವನು ಸತ್ಯಾಗ್ರಹಿಯು !
ಎಂದಿಗೂ ಶಾಪಕೊಡದವನು ಸತ್ಯಾಗ್ರಹಿಯು !
ರಾಕ್ಷಸೀ ಬಲದಿಂದ ನಮ್ಮನಾಳುವ ಜನರ
ಹಳವಿಗೆಗೆ ಬಾಗದವನವನೆ ಸತ್ಯಾಗ್ರಹಿಯು !
ತನ್ನ ಗೌರವ ಕೆಡದ ರೀತಿಯಲಿ ನಡೆಯುವನು,
ತನ್ನ ಚಾಗಕೆ ತಾನೆ ಒಲು ಹೆಮ್ಮೆ ಪಡದವನು,
ಮೆರೆಯದೆಯೆ ಹಡೆದ ಮಾತೆಯ ಸೇವೆಯನು ಮಾಡಿ
ಮೌನದಿಂ ಮಡಿವವನು ಧನ್ಯ ಸತ್ಯಾಗ್ರಹಿಯು !
ಕಲಿಯುಗದ ಪ್ರಜ್ಞಷ್ಣ ಕಲ್ಕಿ ಸತ್ಯಾಗ್ರಹಿಯು !

# ಶ್ರಾವಣ ಸಂಧ್ಯಾಸಮೀರಣ

ಶ್ರಾವಣ ಸಂಧ್ಯಾಸಮಯ ಸಮೀರನು
ಅಮಂದಗಮನದಿ ಬರುತಿಹನು,
ಸುಯ್ಯನೆ ಬೀಸಿ ಬರುತಿಹನು!
ಪಡುಗಡಲಿನ ಪೆರ್ದೆರೆಗಳ ಗುಡಿಯಲಿ
ತುಂತುರುವನಿಗಳ ಕೂಡಾಡಿ,
ಬೆಳ್ನೊರೆಯುರುಳಿಯ ಚೆಲ್ಲಾಡಿ,
ಜಲನಿಧಿ ಘೋಷದಿ ಬರುತಿಹನು,
ಕಡಲಿನ ವಾರ್ತೆಯ ತರುತಿಹನು!
ಶ್ಯಾಮಲಪಲ್ಲವ ಸುಮ ಸಂಪೂಜಿತ
ಭೀಮನಿಬಿಡತರುರಾಜಿ ವಿರಾಜಿತ
ಮಲಯ ಸಹ್ಯವನ ಪರ್ವತ ಶಿಖರದಿ
ಯಾತ್ರೆಗೈದು ಪಾವನನಾಗಿ
ಪುಣ್ಯಪವನನು ಬರುತಿಹನು
ಧಾವಿಸಿ ಬರುತಿಹನು!

ಸುನೀಲ ಶ್ಯಾಮಲ ಜಲಧರ ಪಙ್ಕ್ತಿಯ
ತೇಲಿಸಿ ಶ್ರಾವಣವ್ಯೋಮದಲಿ,
ತಂಪನು ಸೂಸುತ, ತಣ್ಣನೆ ಬೀಸುತ,
ಸೋನೆಯ ಚಿಮುಕಿಸಿ ಭೂಮಿಯಲಿ,
ಮಂಗಳ ಪವನನು ಬರುತಿಹನು,
ಬೀಸಿ ಬರುತಿಹನು!
ಹಸುರನೋಕರಿಪ ಜೋಳದ ಹೊಲದಲಿ
ತೊಳಲಿ ಚಿಮ್ಮಿ ಸರಸವನೆಸಗಿ,
ಸಾಲುಮರಗಳಿಂದುಣ್ಮಿ ಯೇರುತಿಹ

ಪಿಕರುತಿಗಂದಣವನು ಏಸಗಿ,
ಕೂದಲು ಕೆದರಿಹ ಈಚಲು ಮರಗಳ
ಮಿದುಳಿನಲಿ ಸುರಾಕ್ರೀಡೆಯನಾಡಿ,
ಅರಳಿ ಮರಗಳಲಿ, ಬಿದಿರು ಮೆಳೆಗಳಲಿ,
ಮರ್ಮರ ಸಿಮಿಸಿಮಿ ಸದ್ದನು ಮಾಡಿ,
ಅಧ್ರುವವನು ತೂರಿ,
ಧ್ರುವದೆದೆಯನು ತೋರಿ,
ನೂತನ ಚೇತನ ದಾಯಕನು,
ಶ್ರಾವಣ ತೋಯದ ನಾಯಕನು,
ಪುಣ್ಯ ಸಮೀರನು ಬರುತಿಹನು,
ಬೀಸಿ ಬರುತಿಹನು!

ಆಗಾಮಿಕ ಶ್ಯಾಮಲ ಆನಂದವ
ಭೂದೇವಿಯ ಅಂತಃಕರಣದಲಿ
ದೀಪನಗೈಯ್ದೈತರುತಿಹನು,
ಸಮೀರ ಬರುತಿಹನು!

ಉತ್ಸಾಹದಿ ಅನುರಾಗದಿ ವೇಗದಿ
ಮುದಿಗನಸುಗಳನು ತೂರುತ್ತ,
ಹೊಸಗನಸನು ಮೊಳೆದೋರುತ್ತ,
ಪಾವನ ಪವನನು ಬರುತಿಹನು,
ಜೀವವ ತರುತಿಹನು!

ಅಸ್ತಾಚಲ ಶೃಂಗಸ್ಥ ದಿನೇಶನ
ತಪ್ತ ಸುವರ್ಣ ಜ್ಯೋತಿಯ ಹೊದೆದಿಹ
ನೀರಾಕರದಲಿ ವೀಚಿಯ ವಿರಚಿಸಿ,
ಹರ! ಹರ! ಹರ! ಹರ! ನಿನದವ ನಿರ್ಮಿಸಿ,
ಶ್ರಾವಣ ಸಂಧ್ಯಾಸಮಯ ಸಮೀರನು

### ಶ್ರಾವಣ ಸಂಧ್ಯಾಸಮೀರಣ

ಆಮಂದಗಮನದಿ ಬರುತಿಹನು,
ಸುಯ್ಯನೆ ಬೀಸಿ ಬರುತಿಹನು!

ಶ್ರಾವಣ ಸಂಧ್ಯಾಸಮಯ ಸಮೀರ,
ಸ್ವಾಗತ ನಿನಗೆ ಪಯೋಧಿಯ ವೀರ!
ಸ್ವಾತಂತ್ರ್ಯದ ರುಚಿಯರಿತಿಹ ಧೀರ,
ಸ್ವಾತಂತ್ರ್ಯದ ಸಂದೇಶವ ತಾರ!
ಮುಕ್ತಸಮೀರ, ಬಾರಾ! ಬಾರಾ!
ಸತ್ಯಾಗ್ರಹವನು ನೀನೂ ಸೇರಾ!
ಸೆರೆಮನೆಗಾದರು ಬಲ್ಲವರೆಲ್ಲ,
ಸೇನೆಯ ನಡೆಸಲು ಬಲ್ಲಿದರಿಲ್ಲ,
ದಳಪತಿಯಾಗೈ ನೀನೆಮಗೆಲ್ಲ;
ಬಾರ ಸಮೀರ! ಮುಕ್ತಿಯ ಮಲ್ಲ!
ಹನುಮನ ಹೆತ್ತವ ನೀನಲ್ತೆ?
ಭೀಮನ ಪಡೆದವ ನೀನಲ್ತೆ?
ಕಡಲೊಡಲಿನ ಬಡಬಾಗ್ನಿಯ ರೌದ್ರವ
ನಮ್ಮೊಡಲಲಿ ಕೆರಳಿಸಿ ಬಾರ!
ಸುಳಿಗಾಳಿಗೆ ಘೋರ್ಗರೆವ ಸಮುದ್ರವ
ನಮ್ಮೆದೆಗಳಲುರುಳಿಸಿ ಬಾರ!
ಮುಂಗಾರ್ಮೊಳಗನು ಗುಡುಗನು ಮಿಂಚನು
ನಮ್ಮೆದೆಗೂಡುತ ನೀ ಬಾರ!
ವಿಪ್ಲವ ಮೂರ್ತಿಯ ಕಳ್ಳೊಳಸಂಚನು
ತುತ್ತೂರಿಯೂದುತ ನೀ ಬಾರ!
ಶ್ರಾವಣ ಸಂಧ್ಯಾಸಮಯ ಸಮೀರ!
ಸ್ವಾಗತ, ಬಾರಾ! ಧೀರರ ಧೀರ!

# ಜಡವಾದಿ

ಉರುಳುರುಳು ಹಗಲಿರುಳು
ಸುಂದರ ವಸುಂಧರಾ !
ಕಾಲ ದೇಶಗಳೆಂಬ
ಎರಡು ದಡಗಳ ತುಂಬ
ಹರಿವ ಬಾಳಿನ ಹೊಳೆಯು
    ಹೊನಲಿನಲಿ ಸಿಕ್ಕಿ,
    ಸೆಳವಿನಲಿ ಸುಕ್ಕಿ,
ಉರುಳುರುಳು ಹಗಲಿರುಳು
ಎಲೆ ಧರಣಿ ! ನಿಷ್ಕರುಣಿ !
    ನೀನಲ್ತೆ ತರುಣಿ ?

ಆಕಾಶ ಜಲಧಿಯಲಿ
ಈಜೀಜು ಜರುಜನಲಿ ;
ಸೂರ್ಯದೇವನ ಸುತ್ತ
ಸಂಚರಿಸದತ್ತಿತ್ತ
ಎಳೆದ ಗೆರೆಯೊಳೆ ತಿರುಗು.
ನೀನೆಮಗೆ ತಾಯಲ್ತೆ ?
ತಾಯಾದರೇನಂತೆ
ಮೋಹಾರಿಗೋ ದಾಸಿ !
ಓ ದಾಸಿ, ನರ್ತಕಿಯೆ,
    ಎಲೆ ಭೂಮಿರಾಣಿ,
ನೀನಳಲ ಹೊರೆಹೊರೆವ
    ಬರಿ ದೊಡ್ಡ ದೋಣಿ !
ತಾಯಂತೆ ? ತಾಯಂತೆ !
ಮಂಕರಾ ಭಾವುಕರು,

## ಜಡವಾದಿ

ಕನಸುಣಿಗಳಾದವರು
ನೀನೆಮಗೆ ತಾಯೆಂದು
ಚೀರುತಿಹರಲ್ಲ!
ನೀದಾಸಿ ಎಂಬುದನು
ಜಡವಾದಿ ಒಲ್ಲ.
ನೀನೆ ಕೈಯೆತ್ತೆಮಗೆ
ಕೊಟ್ಟುದೇನಿಹುದು?
ನೀನೆ ಕೃಪೆಮಾಡೆಮಗೆ
ಬಿಟ್ಟುದೇನಿಹುದು?
ನಾವು ಸುಲಿದರೆ ಉಂಟು
ನಿನ್ನ ಬಸಿರಿನ ಗಂಟು!
ನಾವು ಬೇಡಿದರೆಮಗೆ
ಬರಿ ಕಲ್ಲು, ಮಣ್ಣು,
ಹೆಚ್ಚು ಎಂದರೆ ಜನವು
ಉಗುಳುವಾ ಹಣ್ಣು!

ಉರುಳುರುಳು ಹಗಲಿರುಳು
ಎಲೆ ಧರಣಿ, ನಿಷ್ಕರುಣಿ,
ತೆರೆದ ಕಣ್ಣನು ಮುಚ್ಚಿ,
ಕಿವುಡುಗಿವಿಯನು ಬಿಚ್ಚಿ,
ಎಲ್ಲರೆದೆಗಳ ಚುಚ್ಚಿ,
ಉರುಳುರುಳು ಹಗಲಿರುಳು,
ಓ, ದಾಸಿ! ಓ, ಹುಚ್ಚಿ!
ಬರಿ ಭ್ರಾಂತಿ ಆ ಶಾಂತಿ!
ಕರ್ಣನಿಗೆ ಆ ಕುಂತಿ
ತಾಯಂತೆ ಅಂತೆ!
ಓ ಭೂಮಿ, ನೀನೆಮಗೆ
ತಾಯಲ್ತೆ ಅಂತೆ.

ಮನುಜರೆಂಬುವ ಕುರಿಯು
ಮಂದೆಯನು ಕಾಯುವಾ
ಓ ಕುರುಬಗಿತ್ತಿ,
ಪೌರುಷಮದ್ಯವ ನೀಡಿ,
ಕುರಿಗಳೆಲ್ಲವ ಕೂಡಿ
ಕೊಬ್ಬುವಂದದಿ ಮಾಡಿ—
ಕಡೆಗೆಲ್ಲಿಯೋ ನಡುವೆ
ಕುತ್ತಿಗೆಗೆ ಕತ್ತಿ !
ಹಗಲಿನಾಸರ ಕಳೆಯೆ
ಇರುಳ ತರುವೆ ;
ಇರುಳಿನಾಸರ ಕಳೆಯೆ
ಹಗಲ ತರುವೆ !
ನಿನ್ನ ಮಕ್ಕಳೆ ನಿನಗೆ
ಹಾದಿಯಲಿ ಬುತ್ತಿ !
ನೀನೊ ಬರಿ ನೆರೆಯಾಳು ;
ನಾವ್ ನಿನಗೆ ಬರಿಕೂಳು !

ಉರುಳುರುಳು ಹಗಲಿರುಳು
ಸುಂದರ ವಸುಂಧರಾ !
ಬನದ ವೇಷವನುಟ್ಟು,
ಬೆಟ್ಟ ಹೊಳೆಗಳ ತೊಟ್ಟು,
ಹೊಟ್ಟೆಯೊಳಗಿರೆ ಗುಟ್ಟು,
ಕಿಚ್ಚೊಡಲ ಗುಟ್ಟು ;
ಮೇಲೆ ನಗೆಮೊಗ ತೋರಿ,
ಒಳಗಿರುವ ರೌದ್ರವನು
ಲಾಲಿತ್ಯದಲಿ ಮುಚ್ಚಿ,
ಕೋರೆದಾಡೆಯ ದನಿಯ
ಖಗಗಳೆಂಬುವ ಹೊಗಳು-

## ಜಡವಾದಿ

ಭಟ್ಟರಾ ಗಾನದಲಿ
ಮುಳುಗುವಂದದಿ ಮಾಡಿ,
ಉರುಳುರುಳು ಹಗಲಿರುಳು
ಸುಂದರ ವಸುಂಧರಾ !

ಏನಾದರೇನಂತೆ ?
ನಿನಗದೇನಂತೆ !
ಯಾರು ಹುಟ್ಟಿದರೇನು ?
ಯಾರು ಸತ್ತರೆ ಏನು ?
ನಿನ್ನ ಕಂಜಿಯ ಮೇಲೆ
ನೀನುರುಳು ದಾಸ್ಯದಲಿ ;
ನಾ ಕುಳಿತುಕೊಂಡಿಲ್ಲಿ
ಕರತಾಳ ಹಾಕುವೆನು
ಒಲ್ಲ ಹಾಸ್ಯದಲಿ !
ತಿಳಿಯದಿಹ ಮಂಕರಿಹ
ಈ ವಿಶ್ವದಲ್ಲಿ,
ಬರಿಯ ಬಯಲಿಗೆ ಕೈಯ
ಮುಗಿಯುವವರಲ್ಲಿ
ನಾವಿಬ್ಬರಿಹೆವೈಸೆ
ತಿಳಿದ ಕಪಟಿಗಳು !
ಗುಟ್ಟನಡಗಿಸಿ ನಡೆವ
ನೀನೊಬ್ಬ ಕಪಟಿ,
ಗುಟ್ಟ ತಿಳಿದುಸಿಕನಿಹ
ನಾನೊಬ್ಬ ಕಪಟಿ !

ತಾಯಿ ಚೊಚ್ಚಲು ಮಗುವ
ನಲ್ಮೆಯಲಿ ಹೆತ್ತು,
ತುಂಬು ಮೊಲೆಯನು ಕೊಟ್ಟು,

ಕೆನ್ನೆಯಲಿ ಮುತ್ತಿಟ್ಟು
ನಲಿಯುವಾ ವೇಳೆಯಲಿ
ಎಲ್ಲಿಂದಲೋ ಮಿತ್ತು
ಓಡೋಡುತೈತಂದು,
ಹೊತ್ತ ಶಿಶುವನು ಕಿತ್ತು
ಹಿಸಿದು ತಿಂಬುದ ಕಂಡು
    ತಾಯಿ ಗೋಳಿಡಲು,
ಬೀಳುತಿರೆ ನಿನ್ನಡಿಗೆ
    ಕಣ್ಣೀರ ಕಡಲು ;
ನಿನ್ನ ಕಂಬಿಯ ಮೇಲೆ
    ನೀನುರುಳು ಧರಣಿ.
ನಿನ್ನ ವಿಟಸದೊ ಅಲ್ಲಿ
    ಹೊಳೆಯುವನು ತರಣಿ !

ಒಂದು ರಾಜ್ಯವ ಗೆದ್ದು,
ಸಿರಿಯನೆಲ್ಲವ ಕದ್ದು,
ಬಲವಂತರಾದವರು
ಬಲವಿಲ್ಲದವರುಗಳ
    ತುಳಿಯುತಿರಲು,
ಜನರ ಮೊರೆ ಬಾನೆಡೆಗೆ
    ಮುಟ್ಟುತಿರಲು,
ಉರುಳುರುಳು ಹಗಲಿರುಳು
ಎಲೆ ಧರಣಿ ! ನಿಷ್ಕರುಣ !
ಕುರಿ ಕುರಿಯ ತಿಂದರದು
ಕುರುಬನಿಗೆ ಕೇಡಲ್ತು !
ತಿಂದ ಕುರಿ ತಿಂಬ ಕುರಿ
ಕುರುಬಗೆರಡುಣಿಸಲ್ತೆ ?
ಎಲೆಧರಣಿ ! ನಿಷ್ಕರುಣಿ !

ನೀನೆಂಥ ಮಾರಿ!
ಓ ಮಂಕು ಸರಗುರಿಯೆ,
ಭೂಮಿ ಒರಿದೋಣಿ ಕಣೊ!
ತಾಯಿ ಮಡಿಲೆಂದೇಕೆ
ಒರಿದೆ ಬಿಮೆಗೊಂಡಿರುವೆ?
ಜಡವು ಜಡವನು ಹೊತ್ತು,
ಜಡವು ಜಡವನು ಹೆತ್ತು,
ಜಡವು ಜಡದಲಿ ಮುಳುಗಿ
ಹೋಗುವುದೆ ಮಿತ್ತು!
ಹುಸಿ ಜಡವ ನಂಬುವರೆ
ಚೇತನಂಗೆತ್ತು?
ಕಡೆಗೆ ಭೂಮಿಯೆ ನಮಗೆ
ಕಡೆಯ ಸುಡುಗಾಡು;
ತಾಯ ಮಡಿಲೇ ನಮಗೆ
ಮಸಣದಾ ನೂಡು!
ತಿರೆಯು ಬಸಿರದು ಬರಿಯ
ಬಲ್ಮಸಣವಲ್ತೆ?
ಯುಗಯುಗಗಳಡಗಿರುವ
ಹಿರಿ ಗೋರಿಯಲ್ತೇ?
ಚಕ್ರಾಧಿಪತ್ಯಗಳು,
ಚಕ್ರವರ್ತಿಗಳು,
ನಾಗರಿಕ ದೇಶಗಳು,
ನಾಗರಿಕತೆಗಳು,
ಕ್ರಿಸ್ತ ಬುದ್ಧರು, ರಾಮ—
ಕೃಷ್ಣಾವತಾರಗಳು,
ವಾಲ್ಮೀಕಿ ವ್ಯಾಸಾದಿ
ಕವಿವರರು ಯೋಗಿಗಳು;
ಚಿರಜೀವಿಗಳು ಎಂದು

ಪ್ರಖ್ಯಾತರಾಗಿರುವ
ಹನುಮ ಅಶ್ವತ್ಥಾಮ—
ಎಲ್ಲ ಮಣ್ಣಾಗಿಹರು
ಭೂಮಾತೆಯೊಡಲೊಳಿಹ
  ಬಸಿರ ಮಸಣದಲಿ!

ಸವಿಗನಸುಗಳು ಸಿಡಿದು
  ಹಾಳಾಗುತಿರಲಿ!
ಉರುಳುರುಳು ಹಗಲಿರುಳು
ಓ ಭೂಮಿ ರಾಕ್ಷಸಿಯೆ!
ನರರ ಗೋಳನು ಕೇಳಿ
  ಮರುಗದೆಯೆ ಉರುಳು;
ನಾಗರಿಕತೆಗಳಳಿಯೆ
  ಲಕ್ಷಿಸದೆ ಹೊರಳು;
ಬೇಲೂರು ಹಳೇಬೀಡು
ಹಾಳಾದರೇನಂತೆ?
  ನೀನುರುಳು ಉರುಳು;
ಶ್ರೀ ಗೋಮಟೇಶ್ವರನು
ಗಾಳಿ ಮಳೆಯಲಿ ಕರಗಿ
  ಹೋದರೇನುರುಳು;
ವೇದ ಸಂಸ್ಕೃತಿಯಳಿದು
  ಹೋದರೇನುರುಳು;
ಭರತಖಂಡವು ಬೂದಿ-
  ಯಾದರೇನುರುಳು!
ತುಂಗೆ ಹರಿಯಲಿ, ಉರುಳು!
ಗಂಗೆ ನಿಲ್ಲಲಿ, ಉರುಳು!
ಉರುಳುರುಳು ಹಗಲಿರುಳು
ಸುಂದರ ವಸುಂಧರಾ!

# ರಕ್ತಧುನಿ

ಬರುತಲಿದೆ! ಬರುತಲಿದೆ!
ವಿಪ್ಲವದ ರಕ್ತಧುನಿ,
ನೋಡು, ಹರಿದುಬರುತಿದೆ!
ಜೀನವಸಿರಿನಿಂದ ಚಿಮ್ಮಿ,
ದಾಸ್ಯಶಿಲೆಯನೊಡೆದು ಹೊಮ್ಮಿ,
ಶ್ರೀಮಂತರ ಕೊಳಕ ಬಚ್ಚಿ,
ಮಠತನ್ನು ಕೊಚ್ಚಿ ಕೊಚ್ಚಿ,
ನೋಡು, ನುಗ್ಗಿ ಬರುತಿದೆ!
ಮರಣದಂತೆ ಮೌನವಾಗಿ
ಪ್ರಳಯದಂತೆ ರುದ್ರವಾಗಿ
ಗುಡುಗಸುಳಿದ ಸಿಡಿಲಿನಂತೆ
ಹೊಳೆವ ಮಿಂಚಿನುದಧಿಯಂತೆ
ಕಾಳಿ ತೆರೆದ ಜಿಹ್ವೆಯಂತೆ
ತರುಣರಕ್ತದರುಣನದಿ
ವಿಪ್ಲವದ ರಕ್ತಧುನಿ
ಬರುತಲಿದೆ! ಬರುತಲಿದೆ!
ನೋಡು! ನೋಡು! ಬರುತಿದೆ!
ತಡೆವ ಧೀರರಾರು? ಬನ್ನಿ!
ಕುಡಿವ ವೀರರಾರು? ಬನ್ನಿ!
ಬನ್ನಿ ಮುಂದಕೆ!
ಈಜಿ, ಈಜಿ ದಡವ ಸೇರಿ
ಬಲುಮೆಯುಳ್ಳೊಡೆ;
ಬೆದರುವೊಡೆ, ಬೆಚ್ಚುವೊಡೆ,
ಮುಳುಗಿ ಸಾಯಿರಿ!

ಮುತ್ತ ಮಠಗಳನೆಲ್ಲ
    ಒತ್ತಿ ಮುರಿಮುರಿದು,
ಮುತ್ತ ಗುಡಿಗಳನೆಲ್ಲ
    ಕಿತ್ತು ತೆಗೆದೊಗೆದು,
ರುಂಡಗಳನು ಮುಂಡಗಳನು
ರಭಸದಲ್ಲಿ ತೇಲಿಸುತ,
ರಾಜ್ಯಗಳ ಗುಡಿಸುತ್ತ,
ರಾಜರನು ಬಡಿಯುತ್ತ,
ಮುಕುಟಗಳನು ತುಳಿಯುತ್ತ
ಗದ್ದುಗೆಗಳನಳಿಸುತ್ತ
ಬರುತಲಿದೆ! ಬರುತಲಿದೆ!
ವಿಪ್ಲವದ ರಕ್ತಧುನಿ
ನೋಡು, ಹರಿದುಬರುತಿದೆ!

ಕೆಂಪುಗಗನವದರ ಬರವ
ನೋಡು, ಅದೋ ತೋರುತಿದೆ!
ಬಿರುಸುಗಾಳಿಯುದರ ಬರವ
ಕೇಳು, ಅದೋ ಸಾರುತಿದೆ!
ಸಿಡಿವ ಮದ್ದು ಸುಂಡೆಯಂತೆ,
ಹಾರಲಿಹ ಫಿರಂಗಿಯಂತೆ,
ಒಡೆಯಲಿರುವ ಬಾಂಬನಂತೆ,
ವಿಪ್ಲವದ ಕೇಸರಿಯು
ರಕ್ತಪಾನಕೆಳಸಿ, ಬಳಸಿ
ಹೊರಗೆ ನೆಗೆಯೆ, ನರಳಿ, ಕೆರಳಿ,
ಸಿದ್ಧವಾಗುತಿರುವುದು,
ಪ್ರಬುದ್ಧವಾಗುತಿರುವುದು;
ನೋಡದೋ! ಕಾಣೆಯಾ?
ಕಪ್ಪುಗಗನ ಲೇಖಿಸಿಯು

ಕಠಾರಿಯಾಗುತಿರುವುದು !
ಇಂಚರದ ಕೊಳಲು ಹರಿದು
ಕಠೋರ ಭೇರಿಯಾಗುತಿದೆ !
ಚೆಲುವೆಯರ ಮುಗುಳ್ನಗೆಯು
ಮರುಳ್ನಗೆಯದಾಗುತಿದೆ !
ದೇಶಭಕ್ತರೆದೆಗಳಿಂದ
ಸೋರ್ವ ನೆತ್ತರೆಲ್ಲ ಸೇರಿ,
ವೀರಸತಿಯರಕ್ಷಿಗಳ
ಶೋಣಿತಾಶ್ರು ನದಿಯು ಸೇರಿ,
ಕ್ರೋಧದಿಂದ, ವೇಗದಿಂದ,
ಸಿರಿಮನೆಗಳನುರುಳಿಸಿ
ಬಡಜನರನು ಕೆರಳಿಸಿ
ಬರುತಲಿದೆ ! ಬರುತಲಿದೆ !
ವಿಪ್ಲವದ ರಕ್ತಧುನಿ
ನೋಡು, ನೋಡು, ಅದೋ ನೋಡು
ಹರಿದು ಬರುತಿದೆ !

# ಕವಿ

ವಸಂತವನದಲಿ ಕೂಗುವ ಕೋಗಿಲೆ
　　ರಾಜನ ಬಿರುದನು ಬಯಸುವುದಿಲ್ಲ;
ಹೂವಿನ ಮರದಲಿ ಜೇನುಂಬುಳುಗಳು
　　ಮೊರೆವುದು ರಾಜನ ಭಯದಿಂದಲ್ಲ.
ವನದೇಕಾಂತದಿ ಪೆಣ್ ನವಿಲೆಡೆಯಲಿ
ಮಯೂರನೃತ್ಯೋನ್ಮತ್ತ ವಿಲಾಸಕೆ
　　ರಾಜನ ಕತ್ತಿಯ ಗಣನೆಯೆ ಇಲ್ಲ;
ನಿದಾಘವ್ಯೋಮದಿ ಮೆಲ್ಲಗೆ ಮೆಲ್ಲಗೆ
ತನ್ನೊಂದಿಚ್ಛೆಗೆ ತೇಲುವ ಮೇಘದ
　　ಆಲಸ್ಯಕೆ ಅರಸನ ಅಳುಕಿಲ್ಲ.
ಗಾಳಿಯ ಮುತ್ತಿಗೆ ಮೈ ಜುಮ್ಮೆನ್ನಲು
ತೆರೆತೆರೆತೆರೆಯುಹ ತಿಳಿಗೊಳದೆದೆಯಲಿ
ಮಿನುಮಿನು ಮಿಂಚುವ ನುಣ್ ಬೆಳುದಿಂಗಳ
　　ಲೀಲೆಗೆ ದೊರೆಮೆಚ್ಚುಗೆ ಬೇಕಿಲ್ಲ;
ಸಿಡಿಲನು ಸಿಡಿಯುತೆ ಮೊಳಗುತೆ ನುಗ್ಗುವ
ಕಾರ್ಗಾಲದ ಕರ್ಮುಗಿಲಿಂ ಹೊಮ್ಮುವ
ಕೆಂಗಿಡಿ ಬಣ್ಣದ ಹೊಂಗೆರೆ ಮಿಂಚಿಗೆ
　　ಆಸ್ಥಾನದ ದಾಸ್ಯದ ಹುರುಳಿಲ್ಲ.
ಕತ್ತಲೆ ಮುತ್ತಿದ ಬಾನಲಿ ಮಿಣುಕುವ
　　ತಾರೆಗೆ ದೊರೆಯಾಣತಿ ತೃಣವಿಲ್ಲ.
ವಿಪ್ಲವ ಮೂರ್ತಿಯ ಸಖನಾಗಿಹನೈ;
　　ಕವಿಗರಸುಗಿರಸುಗಳ ಋಣವಿಲ್ಲ!
　　　ಅವನಗ್ನಿ ಮುನಿ!
　　　ಪ್ರಲಯ ಶಿಖಿ!

# ಭರತಮಾತೆ

ಅಯ್ಯೊ ನಾನೆ ತಿಳಿಯದಂತೆ
ನನಗೆ ಮುಕ್ತಿ ದೊರಕಿತಂತೆ!
  ಎಂಥ ಮುಕ್ತಿಯೋ?—ಅದು
  ಎಂಥ ಮುಕ್ತಿಯೋ!
ಮೈಯಲುಗಿಸ ಬಾರದಂತೆ;
ಕೈಯಲುಗಿಸ ಕೂಡದಂತೆ;
ಪಕ್ಕದೊಳಿರುವಕ್ಕನೊಡನೆ
ನುಡಿಯೆ ಹಕ್ಕೆ ಇಲ್ಲವಂತೆ!
ಅಂತು ನನಗೆ ಮುಕ್ತಿಯಂತೆ!
  ಎಂಥ ಮುಕ್ತಿಯೋ?—ಅದು
  ಎಂಥ ಮುಕ್ತಿಯೋ!

ಸರಪಣಿಗಳು ಎಂದಿನಂತೆ
  ಮೊಳಗುತ್ತಿವೆ!
ಕಪ್ಪಣವದು ಕಾಣದಂತೆ
  ಸೂರೆ ಹುತ್ತಿವೆ!
ಹೊಟ್ಟೆ ಉರಿದು; ಹಿಟ್ಟಿಯಿಲ್ಲ.
ಮೈ ಬೆತ್ತಲೆ; ಬಟ್ಟೆಯಿಲ್ಲ.
ನನ್ನ ನಾನೆ ಪೊರೆಯುವಂತೆ
ನನಗೆ ಶಕ್ತಿ ದೊರಕಿತಂತೆ!
  ಎಂಥ ಶಕ್ತಿಯೋ?—ಅದು
  ಎಂಥ ಶಕ್ತಿಯೋ!

ಮೊಗದೊಳೆಸಕ ಮಿಂಚಲಿಲ್ಲ;
ಕಣ್ಗೆ ಹೊಳಪು ಬಾರಲಿಲ್ಲ;

ಬಾಳಿಗೋ ಬೆಳಕೆ ಇಲ್ಲ ;
ಏನೆಂತೋ ಕೇಳ್ವರಿಲ್ಲ !
ನನಗೆ ಸಿರಿಯು ಬಂದಿತಂತೆ
ನಾನೆ ಅದನು ಅರಿಯೆನಂತೆ !
ಎಂಥ ಸಿರಿಯದೋ ?—ಅಯ್ಯೋ
ಎಂಥ ಸಿರಿಯದೋ |

ತಲೆಯ ಹೊರೆಯು ಇಳಿಯಲಿಲ್ಲ ;
ಎದೆಯ ಬೇನೆ ಅಳಿಯಲಿಲ್ಲ ;
ಅಡಿಯ ಬೇಡಿ ಒಡೆಯಲಿಲ್ಲ ;
ದುಡಿವ ದಾಸ್ಯ ಬಿಡಲೆ ಇಲ್ಲ !
ನನ್ನ ಸುತ್ತ ಮುತ್ತ ಮುತ್ತಿ
ನಿಂತಿರುವರು ಕತ್ತಿಯೆತ್ತಿ !
ಅಂತು, ನಾನೆ ತಿಳಿಯೆನಂತೆ !
ನನಗೆ ಮುಕ್ತಿ ದೊರಕಿತಂತೆ !
ಎಂಥ ಮುಕ್ತಿಯೋ ?—ಇದು
ಎಂಥ ಮುಕ್ತಿಯೋ !
ನನ್ನ ನಾಳ್ಗೆ ಸೊಡ್ಡಿದ ಬಲೆ !—ಇದು
ಬರಿ ಕುಯುಕ್ತಿಯೋ !

# ಮೋತಿಲಾಲ ನೆಹರೂ

ನಿನಗೆ ನಾನಾವ ನಮ್ರ ನಮನ ಕೊಡಬಲ್ಲೆ,
 ಓ ಕಲಿಯೆ? ಭರತಖಂಡವೆ ಮರುಗುತಿದೆ ನಿನಗೆ.
 ನೋಡು ಅದೊ, ನಮ್ಮ ತಾಯಿಯ ಮೊಗದ ಮೂಡುನಗೆ
ಬಾಡುತಿದೆ ದುಗುಡದಲಿ! ನಿನ್ನ ಚಿತೆಯೆಡೆಯಲ್ಲಿ
ಲೋಕದ ಮಹಾತ್ಮ ನಿದೆ (ಮರುಕದೊಳೆ ನಾಂ ಒಲ್ಲೆ!)
 ಕೆಚ್ಚು ಮಣಿಯಾಡುತಿದೆ ಹಗೆ ನಡುಗಲಾತನಿಗೆ!
 “ನೆಚ್ಚುಗೆಡದಿರಿ, ಯುದ್ಧವಿದು! ಬಿಡುಗಡೆಯು ಮನೆಗೆ
ಬಾಗಿಲಿಹುದಿಂತಹ ಹುತಾತ್ಮರ ಮರಣದಲ್ಲೆ!”
ಪಂಜರದೊಳಿದ್ದರೂ ಸಿಂಹದಂತೆಯೆ ಬಾಳಿ
 ಗರ್ಜಿಸುತ ತೆರಳಿದೈ! ನಿನ್ನ ಆ ಒಲ್ಮೆಯುಲಿ
ನಮ್ಮನೂ ಕಲಿಗಳಾಡಿಹುದು. ಸೆರೆಮನೆಯ ಸೀಳಿ
 ಮುಕ್ತಾತ್ಮನಾಗಿರುವೆ ಮುಳುಗಿ ಚಿರಮುಕ್ತಿಯಲಿ!
ಮೋತಿಲಾಲ! ನಿನ್ನ ದಹಿಸಿದ ಸೂಡಿನುರಿಗಾಳಿ
 ತಗುಲಿಹುದು ಸೆರೆಮನೆಗೆ! ಸೋಕದಕೆ ಹಗೆಯೆ ಬಲಿ!

# ಮಹಾತ್ಮಾ ಗಾಂಧಿ

ಈ ಮಹಾಸ್ವಾತಂತ್ರ್ಯರಣಯಾಗ ಧೂಮದಲಿ
ಶ್ವೇತಾಗ್ನಿ ಜ್ವಾಲೆಯೊಂದುರಿಯುತಿದೆ ; ನಿಶ್ಚಲಂ
ರಂಜಿಸುತ್ತಿದೆ—ಶಾಂತಿಯಲಿ ಹಿಮಮಹಾಚಲಂ
ರಾರಾಜಿಪಂತೆ ನೀಲಿಮ ನಭೋಧಾಮದಲಿ.
ಲೋಕಲೋಚನದಂತರಾಳದಾರಾಮದಲಿ
ವಿಶ್ವಕಂಪನಕಾರಿಯಾದ ಧರ್ಮದ ಬಲಂ
ಮೂರ್ತಿಗೊಳೆ ಮೂಡಿದೀತನು ಮಹಾತ್ಮನೆ ವಲಂ !
ಬಾಳು ಪಾವನವಾದುದೀತನಿಂ ಭೂಮಿಯಲಿ !
ಓ ಮಹಾತ್ಮನೆ, ನಿನ್ನ ಸಾನ್ನಿಧ್ಯತೀರ್ಥದಲಿ
ಮಾನವನ ಮೋಹಮದಮಾತ್ಸರ್ಯಗಳು ಮಿಂದು
ಪ್ರೇಮದಿ ಪುನೀತವಾಗಿಹವು ! ಸುಮುಹೂರ್ತದಲಿ
ಭಾರತಾಂಬೆಯ ಸಿರಿಸಿರಿಯಿಂದಲೈತಂದು
ಧರ್ಮದಲಿ ನೆಚ್ಚುಗೆಡುತಿಹೆ ಮಗೆ ನೀನಿತ್ತೆ
ಪ್ರಚ್ಛನ್ನ ಕಲ್ಕಿಯೋ, ದೃಢಭಕ್ತಿಯನು ಮತ್ತೆ !

# ಭರತಮಾತೆಗೆ

ನಿನ್ನ ಸುಲಿಗೆಯ ಕತೆಯನೋದುತಿರೆಯಿರೆ ಕಣ್ಣು
ಹನಿ ತುಂಬಿ ಮಂಜಾಗುವುದು ; ದೈನ್ಯದಲಿ ನೊಂದು
ನರಳುವುದು ಬಗೆ ; ಕುದಿಯುವುದು ನೆತ್ತರಿದೆ ಬೆಂದು
ಬಿಸುಸುಯ್ಯುವುದು ; ಕೋಪದುದ್ರೇಕದಲಿ ಮಣ್ಣು
ಗೂಡುತೆ ಮನಶ್ಶಾಂತಿ, ಸ್ಫುರಣೆ ಸಮತೆಗೆಟ್ಟು,
ನೂರಾರು ವಿಷಸರ್ಪಗಳು ಎದೆಯ ಹುತ್ತದಲಿ
ಹೆಡೆಯೆತ್ತಿ ನಿಲ್ಲುವುವು ಬುಸುಗುಡುತೆ! ಚಿತ್ತದಲಿ
ವಿಪ್ಲವದ ನಿಲಯಕ್ಕೆ ಹಗೆತನದ ನೆಲಗಟ್ಟು
ಮೂಡುವುದು! ಹಸಿದ ಹೆಬ್ಬುಲಿಯಂತೆ ನಾಳದಲಿ
ನೆತ್ತರೌಡನು ಕಚ್ಚುವುದು! ಪ್ರಳಯ ಕಾಲದಲಿ
ದಳ್ಳುರಿ ನೆಗೆಯುವಂತೆ ಹೊಟ್ಟೆಯು ಸಿಡಿಲಿಸಿಟ್ಟು
ಬೆಂಕಿವೆಟ್ಟಾಗುತ್ತೆ ಹಗೆಯನೆಲ್ಲನೆ ಸುಟ್ಟು
ನೊಣೆಯಲುರಿ ಕಾರುವುದು!—ಮಸ್ಕಿ ನಮ್ಮ ; ನಿಲ್ಕಿ
ಮಮತೆಯಲಿ ಒಮ್ಮೊಮ್ಮೆ ಕವಿಯಾಗುವನು ಕಲ್ಕಿ!

# ಇಂದಿನ ದೇವರು

ನೂರು ದೇವರನೆಲ್ಲ ನೂಕಾಚೆ ದೂರ
ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ!

ಶತಮಾನಗಳು ಬರಿಯ ಜಡಶಿಲೆಯ ಪೂಜಿಸಾಯ್ತು;
ಹಾವ್ಗಳಿಗೆ ಹಾಲೆರೆದು ಪೋಷಿಸಾಯ್ತು!
ಬಿಸಿಲು ಮಳೆ ಗಾಳಿ ಬೆಂಕಿಯನೆಲ್ಲ ಬೇಡಿಯಾಯ್ತು;
ದಾಸರನು ಪೂಜಿಸಿಯೆ ದಾಸ್ಯವಾಯ್ತು!

ಗುಡಿಯೊಳಗೆ ಕಣ್‌ಮುಚ್ಚಿ ಬಿಟ್ಟಿರುವರನೆಲ್ಲ
ಭಕ್ತ ರಕ್ತವ ಹೀರಿ ಕೊಬ್ಬಿಹರನೆಲ್ಲ,
ಗಂಟೆ ಜಾಗಟೆಗಳಿಂ ಬಡಿದು, ಕುತ್ತಿಗೆ ಹಿಡಿದು
ಕಡಲಡಿಗೆ ತಳ್ಳಿರೈ ಶಂಖದಿಂ ನುಡಿದು!

ಸಿದ್ಧಿ ಮಾಡುತ್ತಿಹರು ಹಲವು ದೇವತೆಗಳೆಲ್ಲ,
ಬಿದ್ದವರು ಕಲ್ಲಾಗಿ ಕೆಲವಿಹರು;
ಕ್ಲೀಬತನದಲಿ ಮರೆತು ತಮ್ಮ ಪೌರುಷವನೆಲ್ಲ
ಸತ್ತೆಹೋದಂತಿಹರು ಮತ್ತಳಿದಮರರು.

ಅವರ ಗುಡಿ ಹಾಳಾಯ್ತು; ಅವರ ಮಠ ಮುಡಿದುಹೋಯ್ತು;
ಅವರ ನೆಮ್ಮದ ನಮಗೆ ಜೋಳುಗತಿಯಾಯ್ತು!
ಮುಂದಿವಳನಾರಾಧಿಸುವ, ಶಕ್ತಿಯಾರ್ಜಿಸುವ;
ಒಂದು ಶತಮಾನವನು ಒಂದೆ ದಿನ ಜೈಸುವ!

ಸತ್ತ ಕಲ್ಗಳ ಮುಂದೆ ಅತ್ತು ಕರೆದುದು ಸಾಕು,
ಜೀವದಾತೆಯನಿಂದು ಕೂಗಬೇಕು!

## ಇಂದಿನ ದೇವರು

ಶಿಲೆಯ ಮೂರ್ತಿಗೆ ನೆಯ್ಯ ಕಲೆಯ ಕಾಣಿಕೆಯನೊಯ್ಯು
ಚಳಿಯು ಮಳೆಯಲಿ ನವೆವ ತಾಯ್ಗೆ ಸಾಕು !

ಭಾರತಿಯೆ ನಮಗಿಂದು ಜೀವನದ ದೇವತೆಯು,
ವಿಶ್ವರೂಪಿಣಿಯವಳು, ವಿಶ್ವಮಾಯೆಯಲ್ಲ !
ನಮ್ಮೆಲ್ಲರಂಗಗಳೆ ನಮ್ಮಂಜೆಯಂಗಗಳ್ಲ,
ನಮ್ಮ ಸ್ವಾತಂತ್ರ್ಯದೊಳೆ ನಮ್ಮ ಮುಕ್ತಿಯಲ್ಲ !

ಇಂದೊ ನಾಳೆಯೊ ದಾಸಸಿಂಹಾಸನಾಗಲೆ ಬೇಕು,
ಒಂದಿಂದೆ ಎದ್ದೇಳಿ ; ನಾಳೆಯೆನೆ ಶೋಕ !
ನಾವೆ ದೇವತೆಗಳಲ್ಲ ! ಭಾರತವೆ ಸ್ವರ್ಗವಲ್ಲ !
ಭಾರತಾಂಬೆಯೆ ನಮಗೆ ದೇವಿಯಲ್ಲ, ಜನನಿ !

# ಆತ್ಮಶ್ರದ್ಧೆ

ಎಷ್ಟು ದೇವರ ನೀನೆಷ್ಟು ನಂಬಿದರೇನೊಂ-
ದಿಷ್ಟು ನೀ ನಂಬದಿರೆ ನಿನ್ನ ನೀನು?

ಹತ್ತುಸಾವಿರ ಜನರು ಸುತ್ತಲಿದ್ದೊಡಮೇನು
ಚಿತ್ತಹತ್ಯಕೆ ಯಾರು ತಡೆಯ ಕಟ್ಟುವರಯ್ಯ?
ಪರರ ಕೊಲ್ಲಲು ಕತ್ತಿ ಪರಶು ತೋಮರ ಬೇಕು—
ತನ್ನ ಕೊಲ್ಲಲು ಸಣ್ಣದೊಂದು ಸೂಜಿಯೆ ಸಾಕು!

ಶ್ರದ್ಧೆಯಿಂದಲೆ ಸೂರ್ಯ ಗಗನ ದೇಶದಿ ನಿಂತು
ನೂರು ಲೋಕವ ಹಿಡಿವ ಶಕ್ತಿ ಪಡೆದಿಹನಯ್ಯ.
ಶ್ರದ್ಧೆಯಿರುವುದೆ ನಾಕ, ಅಶ್ರದ್ಧೆಯೇ ನರಕ;
ಶ್ರದ್ಧೆಯಿದ್ದರೆ ಕೋಟಿ ದೇವರೆಮಗಾಳಯ್ಯ!

ಮಾನವನೆ ದೇವತೆಯು; ನರನೆ ನಾರಾಯಣನು;
ನಮ್ಮ ವಿಶ್ವಕೆ ನಾವೆ ನಿರುಪಮಾದ್ಭುತವಯ್ಯ!
ಕ್ರಿಸ್ತ ಬುದ್ಧರು ಎಲ್ಲ "ಅಹಮಸ್ಮಿ" ಸಾಗರದಿ
ಮಿಂಚಿ ಮುಳುಗುವ ಹಿರಿಯ ಕಿರಿಯ ಬುದ್ಬುದವಯ್ಯ!

# ಮಲ್ಲಗೀತೆ

ಒಳ್ಳಿತಾಗುವುದೆಲ್ಲ !
ಬೇವು ತುದಿಯಲಿ ಬೆಲ್ಲ !
ಮುಂದೆ ನಡೆ, ತೀರ್ಥವಿಹುದೆಲ್ಲ ಹಾದಿಗಳು ಕೂಡುವೆಡೆಯಲ್ಲಿ !
ಬೆಳ್ಳಗಿರೆ ಹಾಲಲ್ಲ ;
ಬಲ್ಲವನೆ ತಾ ಬಲ್ಲ ;
ಕೇಳಯ್ಯ ನಾನೊಬ್ಬ ಮಲ್ಲನೀ ಜೀವನದ ಗರಡಿಯಲ್ಲಿ !

ಕಾವಿಯೋ ಖಾದಿಯೋ ?
ಅಂತವೋ ಆದಿಯೋ ?
ಯಾವುದೋ ಹಾದಿಯೊಂದನು ಹಿಡಿದು ನಡೆಯಲಿಷ್ಟಡೆಯೆ ಸಿದ್ಧಿ
ಎಲ್ಲ ನದಿಗಳು ತುದಿಗೆ
ಸಾರುವುವು ಜಲನಿಧಿಗೆ—
ಎಂಬ ತತ್ತ್ವವ ತಿಳಿದು ನಮ್ರತೆಯಲಿ ಸಾಗುವುದೆ ಯೋಗಬುದ್ಧಿ !

ಸೋದರನೆ ಬಿಸಿಲಿಹುದೆ ?
ಹಾದಿಯಲಿ ಕೆಸರಿಹುದೆ ?
ಹೊರೆ ಭಾರವಾಗಿದೆಯೆ ? ನೆರೆಯ ಕರೆದವನ ಕೈಗದನು ನೀಡು.
ನಿದ್ದೆಗಳೆದಾವೇಳೆ
ಮತ್ತೆ ಬೆನ್ನಿನ ಮೇಲೆ
ಹೊತ್ತು ನಡೆ ಕರ್ತವ್ಯವನು ; ಮರಳಿ ಬಳಲಿದರೆ ನಿದ್ದೆಮಾಡು !

ನೆರವೀವ ಮಿತ್ರನೈ !
ಜೊತೆ ದುಡಿವ ಪುತ್ರನೈ !
ಯಜಮಾನನಿಗೆ ನೀನು ಹೊರೆಹೊರುವ ಕತ್ತೆಯೊಲು ದಾಸನಲ್ಲ !

ನಿನ್ನ ಸಾಹಸವೆಲ್ಲ
ಅವಸದಲ್ಲದೆ ಇಲ್ಲ ;
ಗುಡಿಯ ಕಟ್ಟುವರೂ ಕಡೆಗೆ ದೇವರಹರಿದಕೆ ಮೋಸವಿಲ್ಲ !

ನಾಕ ನರಕಗಳಿಲ್ಲ
ಪಾಪ ಪುಣ್ಯಗಳಿಲ್ಲ
ನಮ್ಮಾಶೆ ಭಯಗಳಲಿ ನಿಂತಿಹವು ತಮಗಿರದ ಕಾಲನೂರಿ !
ಒಂದು ಕಲ್ಲನು ಕಡೆದೆ ;
ಏನೊ ತಪ್ಪಿದೆ ; ಒಡೆದೆ !
ಬಿಸುಡದನು ಓ ಶಿಲ್ಪಿ ; ಮತ್ತೊಮ್ಮೆ ಯತ್ನಗೈಯುದುವೆ ದಾರಿ !

ತಪ್ಪಿದರೆ ಏನೊರ್ಮೆ ?
ಅನುಭವಕೆ ಅದೆ ಪೆರ್ಮೆ !
ತಪ್ಪಿದರೆ ತಪ್ಪಿಲ್ಲ ; ತಪ್ಪಿನೊಳಳುಕಿ ನಿಲ್ಲಲದುವೆ ಪಾಪ !
ಬೀಳುವುದು ಹರಿವ ಹೊಳೆ ;
ಅದಕಿಹುದೆ ಕೊಳದ ಕೊಳೆ ?
ನೀರು ನಿಲ್ಲದೆ ಹರಿಯೆ ನಿರ್ಮಲದ ಗಂಗೆ ; ನಿಲೆ ಮಲದ ಕೂಪ !

ಕಡಲ ಕಡೆಯಲು ಬೆದರೆ
ನಿನಗೆ ಮರಣವೆ ಮದಿರೆ !
ಕಡಲ ಕಡೆ ; ಸುಧೆಯ ಕುಡಿ ; ಹರಿಹರರ ಮೀರಿ ಚಿರಜೀವಿಯಾಗು !
“ ನಂಜುದಿಸಲೇನು ಗತಿ ?—”
ಅಂಜುವರೆ ಹ್ರಸ್ವಮತಿ ?
ಅವನಿರುವುದದೆ ಕೆಲಸಕಾಗಿ ; ನಂಜುಂಡನನು ಕರೆದುಕೂಗು !

ಮುನ್ನೇಕೆ ಬಂದೆಯೋ ?
ಇನ್ನಾವ ಮುಂದೆಯೋ ?
ಆ ಮೂಲಚೂಲದಲಿ ಕಾಲಹರಣವ ಮಾಡಲಿಹುದೆ ಹೊತ್ತು ?

ಯಾತ್ರೆಗೈತಂದಿರುವೆ ;
ಹೊರೆ ಹೊತ್ತು ನೊಂದಿರುವೆ ;
ನೋಡಿದರೆ ಹಾದಿಯನು ಗುರಿ ದೂರವೆಂಬುದೂ ನಿನಗೆ ಗೊತ್ತು.

ಇಂತಿರಲು ವಾದದಲಿ,
ತಾರ್ಕಿಕರ ಮೋದದಲಿ,
ನನ್ನಿಯನು ಮುಟ್ಟಿನೋಡದೆ ಮಾತಿನೊಳೆ ಕಟ್ಟುವವರ ಕೂಡೆ
ಹೊತ್ತು ಕಳೆಯುವುದೇಕೆ ?
ಸಾಧಕನೆ ಒಲು ಜೋಕೆ !
ಮಾಯೆಗಿಮ್ಮಡಿಮಾಯೆ ವಾದವೆಂಬುವ ಮಾಯೆ, ತಿಳಿದುನೋಡೆ !

ಬರಿಯ ನಂಬುಗೆ ಬೇಡ,
ಬರಿಯ ಸಂಶಯ ಬೇಡ,
ಹಿಂದನೂ ತೊರೆಯದೆಯೆ ಇಂದನೂ ಮರೆಯದೆಯೆ ತೆರಳು ಮುಂದೆ.
"ಅವರವರ ಮತವಿರಲಿ,
ನನ್ನ ಪಥ ನನಗಿರಲಿ."
ಎಂದದನು ಕಂಡುಕೊಳ್ವನೆ ಜಾಣನುಳಿದವರು ಕುರಿಯ ಮಂದೆ.

ಕಣ್ ಮುಚ್ಚಿ ನಡೆಯದಿರು,
ಹೃದಯವನು ಕಡಿಯದಿರು ;
ಕಾಶಿಯಲಿ ನೀನರಿವೆ ಯಾತ್ರೆಯೋ ತೀರ್ಥಕಿಂ ಶ್ರೇಷ್ಠವೆಂದು.
ಯಾತ್ರೆಗಾಗಿಯೆ ಕ್ಷೇತ್ರ,
ಇದು ಸತ್ಯತಮ ಸೂತ್ರ.
ಸಾಧಕಗೆ ತಿಳಿಯುವುದು ತುದಿಯಲ್ಲಿ ಸಾಧನೆಯೆ ಸಿದ್ಧಿಯೆಂದು !

ಆದರಿಂದ ದಾರಿಯೆಡೆ
ಚೆಲುವಿರಲು ನೋಡಿನಡೆ ;
ಗಾನವಿರೆ ಆಲೈಸು, ಕಲೆಯಿರಲು ಓಲೈಸು ಸಡ್ಡೆಯಿಂದೆ.

ಮೂಡೆ ನೇಸರು ನೋಡು,
ನಾಡೆ ಬಣ್ಣಿಸಿ ಹಾಡು,
ಹಾಡಿ ಮುದವನು ಹೀರಿ, ಜನಕೆ ಹರುಷವ ಬೀರಿ ತೇಲು ಮುಂದೆ!

ಹಾಡು ಗೆಳೆಯನೆ, ಹಾಡು!
ಹಾಡಿನಿಂದಲೆ ನಾಡು
ಕಣ್ದೆರೆದು ನೆಚ್ಚುದಿಸಿ ಕೆಚ್ಚಿನಿಂ ನಿನ್ನ ಹಿಂಬಾಲಿಪಂತೆ!
ಹಾಡೆ ಬಾಳಿಗೆ ಭಕ್ತಿ,
ಹಾಡೆ ಜೀವಕೆ ಶಕ್ತಿ;
ಹಾಡು ಜನ್ಮದ ಭಾರವಳಿದು ಕರ್ಮದ ಹೊರೆಯು ಕರಗುವಂತೆ!

ದಾರಿಯಲಿ ಕೊಳದ ಬಳಿ,
ತೆರೆಗಳಲಿ ಮಿಂದುನಲಿ,
ತಿಳಿನೀರನೆಂಟಿ ತಂಗಾಳಿಯಲಿ ಮೈಯೊಪ್ಪಿ ಕಳೆ ದಣಿವನು.
ಹೊಂದಾವರೆಯ ಕೊಯ್ದು
ಚಂದದಿಂದಲಿ ನೆಯ್ದು
ನಿನ್ನೊಲ್ಮೆಗಣ್ಣದನು ಮುಡಿಸಿ ಮುದ್ದಿಸಿ ನಲಿಸಿ ಪಡೆ ತಣಿವನು.

ಹಾದಿಯಲಿ ಹಳ್ಳವಿದೆ,
ಮುಳ್ಳಿಡಿದ ಕೊಳ್ಳವಿದೆ,
ಅಂದಳುಕಿ ಹಿಂದೆಗೆಯದಿರು; ಮುಂದೆ ತೋರುವುದು ಹೂದೋಟವು!
ಯಾತ್ರಿಕರು ನಿನ್ನಂತೆ
ಹೋದವರಿಹರು ಮುಂತೆ;
ಹುಡುಕುವರ ಹಜ್ಜೆಯನು; ಕಾಣುವುದು ನಚ್ಚಿನಾ ನಪಿನೋಟವು!

ಕತ್ತಲೆಯು ಕವಿದು ಬರೆ
ಬಿತ್ತರಿಸಿ ಕಣ್ಣುತೆರೆ;
ರಂಜಿಪುದು ಮುಂದೆ ತೆರಳಿದ ಮಲ್ಲರಾಂತಿರುವ ದಿವ್ಯಜ್ಯೋತಿ!

## ಮಲ್ಲಗೀತೆ

ಮೇಣವರ ಕೂಗಿ ಕರೆ;
ಕೇಳಿಸಲು ನಿನ್ನ ಮೊರೆ
ನಿಲ್ಲುವರು; ಹಿಂದಿರುವ ಸೋದರರ ಕರೆದೊಯ್ಯುವುದವರ ನೀತಿ!

ನೆಚ್ಚಿರಲಿ! ಕೆಚ್ಚಿರಲಿ!
ಮುಂಬರಿವ ಹುಚ್ಚಿರಲಿ!
ಮುಂದುವರಿವುದೆ ಬಾಳು; ಹಿಂದೆ ಸರಿವುದೆ ಸಾವು, ಆತ್ಮಹತ್ಯ!
ಹೋರುವುದೆ ಚೈತನ್ಯ!
ಸುಮ್ಮನಿರೆ ಜಡಶೂನ್ಯ!
ತುದಿಯ ಗುರಿ ಶಾಂತಿ ಎನೆ ಬರಿಸಿದ್ಧಿಯಲ್ಲವದು ಸತ್ಯಸತ್ಯ!

ಎದೆಯ ಕೊರೆಯುವ ಕೀಟ
ಸಂದೇಹದೊಡನಾಟ;
ಸಕ್ಕರೆಯು ಸಿಹಿಯೊ ಕಹಿಯೋ ತಿಂದು ನೋಡದೆಯೆ ತಿಳಿವುದೆಂತು?
ಹಿರಿಯರನುಭವ ಸಿಹಿಯು!
ನಿನಗೊಬ್ಬನಿಗೆ ಕಹಿಯು?
ಒಲಿಯದುಳಿವುದಕಿಂತಲೂ ಒಲಿದಳಿವುದೆ ಮೇಲಲ್ತೆ ಜಂತು?

"ಮುಂದೆ ಬರಿ ಸೊನ್ನೆಯಿರೆ?"
ಮರುಳೆ, ಹಾಗೆನ್ನುವರೆ?
ಹಿಂದೆ ಬರಿಸೊನ್ನೆ, ಮುಂದೆಯು ಸೊನ್ನೆ, ನೀಂ ಮಾತ್ರ ಸೊನ್ನೆಯಲ್ಲ?
ಹೇಡಿಗಳ ವಾದವಿದು,
ಕುಮತಿಗಳ ಬೋಧವಿದು!
ಸೊನ್ನೆಯಿದ್ದರು ಇರಲಿ! ನುಗ್ಗಿ ಮುಂದಕೆ ನೋಡು! ನೀನು ಮಲ್ಲ!

"ಮುಂದೆ ತಾನಹ ಸೊನ್ನೆ"
ಎಂಬನಿಂದೂ ಸೊನ್ನೆ!
ಯಾವ ಸಂಖ್ಯೆಯನೇನು ಸೊನ್ನೆಯಿಂ ಗುಣಿಸಿದರೆ ಲಭ್ಯ ಸೊನ್ನೆ!

ಹಿಂದಿಲ್ಲದಾವಿಂದು ?
ಇಂದಿಲ್ಲದೇಂ ಮುಂದು ?
ಇಂದೆಂಬುದೆಂತಿರುವುದಿಲ್ಲವಾದರೆ ದಿಟದಿ ನಾಳೆ ನಿನ್ನೆ ?

ಗುರಿಗೆಂದೆ ಮುಂಗಂಡು
ಹುಡುಗನೊದೆದಾ ಚೆಂಡು
ಹರಿದಾಡಲಾಡುಂಬೊಲದೊಳದಕೆ ಗುರಿಯಿಲ್ಲವೆಂಬೆಯೇನು ?
ಇರುವಂತೆ ಬಿದಿಯ ಒಗೆ
ತಿರುತಿರುಗಿ ತಿರೆಯೊಳಗೆ
ಇಂದೊ ನಾಳೆಯೊ ಎಂದೊ ಒಂದು ದಿನ ಗುರಿಮುಟ್ಟಿ ಗೆಲುವೆ ನೀನು !

ಕರ್ಮ ನಿನ್ನನು ಕಟ್ಟಿ
ಕೆಡಹಲದನೇ ಮೆಟ್ಟಿ
ಮುಂದ ಮೆಟ್ಟಿಲನೇರು ! ಮರಳಿ ಯತ್ನವ ಮಾಡು ಸತ್ತು ಹುಟ್ಟಿ !
ಹುಚ್ಚು, ಬೆಂಕಿಯ ಹುಚ್ಚು !
ಸುಡಲೆಲ್ಲವನು ಕಿಚ್ಚು !
ಹುಲ್ಲು ಸುಟ್ಟರೆ ಸುಡಲಿ ! ಲೇಸಾಯ್ತು ಟೊಳ್ಳಳಿಯುತುಳಿಯೆ ಗಟ್ಟಿ !

ಬಾಳು ನಂದೊಡಮೇನು ?
ಸಾವು ಒಂದೊಡಮೇನು ?
ಸಾವು ಬಾಳಿನ ಕುಂದನೊಂದರಿಯದಿಹ ಶಾಶ್ವತಾತ್ಮ ನೀನು !
ರವಿ ಮುಳುಗಲೇನಂತೆ ?
ಇರುಳಿಳಿದರೇನಂತೆ ?
ಬಂದಿರುಳಿನುದರದಲಿ ಮಲಗಿಹುದು ಮುಂದೆ ಬಹ ಹಗಲು ತಾನು !

ಹಗಲು ಹೊಗೆ ಹತ್ತಿರಕೆ ;
ಹೊಗೆಯಿರುಳು ಬಿತ್ತರಕೆ ;
ಹಗಲೆಮಗೆ ತೋರದಿಹ ಹಿರಿಯ ವಿಶ್ವವನಿರುಳು ತೋರುತಿಹುದು !

## ಮಲ್ಲಗೀತೆ

ಬಾಳು ಮುಚ್ಚುವ ಮಣ್ಣು,
ಸಾವು ಬಿಚ್ಚುವ ಕಣ್ಣು!
ಇಲ್ಲಿ ಕಂಡರಿಯದಿಹ ಮಹಿಮೆಯನು ನಾವಲ್ಲಿ ಕಾಣಲಹುದು!

ಸೂರ್ಯಚಂದ್ರರ ಗತಿಗೆ
ಕಣ್ಣಾಹ ಜಗಸ್ಮೃತಿಗೆ
ನಿನ್ನ ಗತಿ, ನಿನ್ನ ಮತಿ, ನಿನ್ನ ಸಾಹಸಕೆ ಕಣ್ಣಾಗಲರಿದೇ?
ಭಯವ ಬಿಡು; ನಲವಿಂದೆ
ಹಾಡುತ್ತೆ ನಡೆ ಮುಂದೆ.
ಸಂದೆಯದ ಪುಸಿತೊಟ್ಟಿಲನು ಕಟ್ಟಿ ಮಲಗಿ ಜೋಲದಿರು ಬರಿದೆ!

ಬೈಗುಗೆಂಪುರಿಯಲ್ಲಿ
ಸುಡಲಿ ಸಂಶಯವಲ್ಲಿ!
ಹುಣ್ಣಿಮೆಯ ರಾತ್ರಿಯಲಿ ಹೊರಗೆ ಬಾ ನೋಡು! ಸಂದೆಯದ ಮಚ್ಚು
ಎಲ್ಲಾದರಿಹುದೇನು?
ಎಳ್ಳಾದರಿಹುದೇನು?
ಜಗದ ನಗೆವೊನಲಿನಲಿ ಕೊಚ್ಚಿಹೋಗುವುದು ಸಂದೆಗದ ಹುಚ್ಚು!

ಏಳು, ಮಲ್ಲನೆ ಏಳು!
ಮನವ ಮುದದಲಿ ತೇಲು!
ಕೋಗಿಲೆಗಳುಲಿಯುತಿವೆ ಪಲ್ಲವಿತ ಚೈತ್ರಕಾನನದಿ ಕೇಳು:
ಸಾಹಸವೆ ಸವಿ ಬಾಳು!
ಸಂದೆಯವೆ ಕಹಿ ಕೂಳು!
ನಂಬುಗೆಯ ಸುಗ್ಗಿಯನು ನೆಟ್ಟು ಸಂದೆಯದ ಮಾಗಿಯನು ಕೀಳು!

ನೋಡು, ಎಂತಿದೆ ಮುಗಿಲು!
ಹಸುರ ಮೇಲೆಳೆಬಿಸಿಲು
ಮಲಗಿಹುದು ಲೀಲೆಯಲಿ ಮೈಮರೆತ ಮೋಹನದ ಶಿಶುವಿನಂತೆ!

ಅಲ್ಲಿ ಬನಬನದಲ್ಲಿ,
ಮಾನವರ ಮನದಲ್ಲಿ
ನೆಚ್ಚದಿಸಿ ಚಿಮ್ಮುತಿದೆ! ಕರ್ಮಮಯ ಚೇತನಕೆ ಹೊರತು ಚಿಂತೆ!

ನಂಬು ಗುರಿಯಿಹುದೆಂದು!
ನಂಬು ಗುರುವಿಹನೆಂದು!
ನಂಬು ದಾರಿಯಲಿ ಕೃಪೆ ಕೈಹಿಡಿದು ಹಿಂದೆ ಪಾಲಿಸುವುದೆಂದು!
ಗುರುಭಕ್ತ ನಾನೆಂದು,
ಗುರುಶಕ್ತಿ ನನಗೆಂದು
ನಂಬು! ನಿನ್ನನೆ ನಂಬು! ಮಂತ್ರದೀಕ್ಷಿತಗೆ ಗುರಿತಪ್ಪದೆಂದೂ!

# ಕಾಳರಾತ್ರಿ

ಬಿರುಗಾಳಿ ಬೀಸುತಿದೆ, ಬಿರುಮಳೆಯು ಕರೆಯುತಿದೆ ;
ಮೇಲೆಮೇಲ್ವಾಯ್ದು ಮುಂಗಾರ್ಮುಗಿಲು ಮುತ್ತುತಿದೆ
ಕಣ್ಗಳಿಗೆ ಮೆತ್ತಿ ಕಗ್ಗತ್ತಲೆಯನು ; ಸಿಡಿಲೆರಗಿ
ಮಿಂಚೆಸೆದು ಲೋಕ ಕಂಪಿಸುತಿದೆ ; ಹೊಸಲೇರಿ
ಹೊಳೆಯುಕ್ಕಿ ಮನುಜರನು ಕೊಚ್ಚುತಿದೆ. ಬೆಚ್ಚುತಿದೆ
ನರನೆದೆಯು ನೆಚ್ಚುಗೆಟ್ಟು. ಎಲ್ಲೆಡೆಯು ಕೇಳುತಿದೆ
ಹಾ ಕಾರವು. ಕ್ರಾಂತಿ ಎಂಬುವ ಭೂತ ತಲೆಗೆದರಿ
ಹುಚ್ಚೆದ್ದು ಸುತ್ತುತಿದೆ ಭೀಮ ಛಾಯೆಯ ಚೆಲ್ಲಿ.
ಓ ಎಲ್ಲಿ? ಶಾಂತಿ ಸೂರ್ಯನು ಎಲ್ಲಿ? ಮುಳುಗಿದನೆ?
ಮುಂದೆಂದು ಮೂಡದಿಹನೆ? ಕೊನೆಗಾಣದಿರುವುದೇ
ಈ ಕಾಳರಾತ್ರಿ? ನರಹೃದಯದಲಿ ತುಂಬಿರುವ
ಪಂಕದಿಂದಲೆ ಮರಳಿ ಕಮಲಗಳು ಕಾಣಿಸವೆ?
ಮನವೇ, ನಿರಾಶೆಯಲಿ ಕೊರಗದಿರು! ಸಾಗರದ
ಮಥನದಲಿ ವಿಷವು ಜನಿಸಿದೆ ಇಂದು! ಮೂಡುವುದು
ಮುಂದೆ ಸೊದೆ! ಹಗಲು ಬರುವುದು ತೊಲಗಿ ಕಾಳರಾತ್ರಿ!

# ಭಾರತ ತಪಸ್ವಿನಿ

ವೇದ ಋಷಿ ಭೂಮಿಯಲಿ ನಾಕನರಕಗಳಿಂದು
ಸಾವು ಬದುಕಿನ ಕಟ್ಟಕಡೆಯ ಹೋರಾಟದಲಿ
ಸಂಧಿಸಿವೆ. ಮಾನವನೆದೆಯ ಕಾಳಕೂಟದಲಿ
ಅಮೃತವನೆ ಹಾರೈಸಿ ಬಲಿರಕ್ತದಲಿ ಮಿಂದು
ಕಾದಿಹೆವು ಕಣ್ಣೀರು ತುಂಬಿ. ನಾಗರಿಕತೆಯ
ನಾಗಿನಿಯು ಪ್ರಗತಿನಾಮಕ ಫಣೆಯ ಮೇಲೆತ್ತಿ
ಚುಂಬಿಸಿಯೆ ಕೊಲ್ಲಲೆಳಸುತಿದೆ.—ಹಿಂದಿನ ಬಿತ್ತಿ
ಸಮೆಯುತಿದೆ. ಇಂದಿನ ಮಹಾತಪಸ್ಸಿನ ಚಿತೆಯ
ರಕ್ತಿಮ ವಿಭೂತಿಯೊಳೆ ಮುಂದಿನ ಸರ್ವೋದಯದ
ಧವಳಿಮ ಪಿನಾಕಧರಸ್ಮೃತಹಸು : ಮತ್ತೊಮ್ಮೆ
ಭಾರತಾಂಬೆಯು ಜಗದ ಬೆಳಕಾಗುವಳು ; ಹೆಮ್ಮೆ
ಗೌರವಗಳಿಂದ ಜನಗಣದ ಕಟು ನಿರ್ದಯದ
ಲೋಭಬುದ್ಧಿಯ ಹೀನ ಕುಟಿಲತೆಯನುರೆ ನೀಗಿ
ಮೆರೆವಳು ತಪಸ್ವಿನಿಯೆ ಚಕ್ರವರ್ತಿನಿಯಾಗಿ !

# ಬುದ್ಧದೇವ

ವಿಕಸಿತ ಸಹಸ್ರದಲ ಪದ್ಮಪೀಠದ ಮೇಲೆ
ಮಂಡಿಸಿಹ ಧವಲಿಮಾ ಧ್ಯಾನಸ್ತಿಮಿತಮೂರ್ತಿ,
ಹೇ ಬುದ್ಧದೇವ, ನಿನ್ನತುಲ ಬುದ್ಧಿಸ್ಫೂರ್ತಿ
ಮಾನವನ ಮೂರ್ಖತೆಯ ದಹಿಸುವ ಮಹಾಜ್ವಾಲೆ.
ಅರ್ಥವಿಲ್ಲದ ಕರ್ಮತತಿಯ ಮರುರಂಗದಲಿ
ಶುಷ್ಕ ಆಚಾರ-ಸೈಕತದಲ್ಲಿ ನಡೆಗೆಟ್ಟು
ನಿರ್ಮಲ ವಿಚಾರ-ನದಿ ಲಯವಾಗುತಿರೆ; ಕಟ್ಟು
ಕಟ್ಟಳೆಯ ಲೌಹ ಶೃಂಖಲೆಯ ಯಮಸಂಗದಲಿ
ಕುಬ್ಜವಾಗುತಲಿರಲು ಧರ್ಮದ ಮಹೋನ್ನತಿಯು,
ವೈರಾಗ್ಯವರ್ಮವನು ಕರೆದು, ಜನರಲಿ ಮತಿಯು
ಶ್ರುತಿಯ ಬಂಡೆಯ ಬಿರಿದು ಮೂಡುವಂತೆಸಗಿರುವೆ.
ಹೇ ಪುಣ್ಯಮತಿಮೂರ್ತಿ, ಮತದ ಮತಿಹೀನತೆಯು
ಸಾಕೆಮಗೆ; ಬೇಕು ಸಸ್ಕೃತಿಯು ನಾಗರಿಕತೆಯು:
ನರನ ಸಸ್ಕೃತಿಗಿಂತ ಬೇರೆಯು ಜಗದ್ಗುರುವೆ?

# ಮುಕ್ತಿರಾಹು

ಧುಮುಕಿದೆ!—ಘನತಿಮಿರದ ಪಾತಾಳದ
ಗರ್ಭಕೆ ಧುಮುಕಿದೆ!—ಅನಂತ ಕಾಲದ
ಸುಪ್ತಿಯ ಜಠರಕೆ ಧುಮುಕಿದೆ!—ಧುಮುಕಿದೆ
ಪ್ರಜ್ವಲಿಸುವ ಮಹದುಲ್ಕೆಯ ತೆರದಲಿ
ಜ್ವಾಲಾಮಯ ಲಾಂಗೂಲದ ಭರದಲಿ
    ಮೃತ್ಯುಕಾತರ ವೇಗದಲಿ!
ಮಧುರ ಮೋಹನ ಮಾಯೆ ಮುಂಗಡೆ
ಮಳೆಬಿಲ್ಲಿನ ಬಣ್ಣದ ಹಾಸದಲಿ
    ಕಟ್ಟಿ ಚುಂಬಿಸಿ ಸೆಳೆದಿತ್ತು!
ಮುಕ್ತಿರಾಹುವ ಛಾಯೆ ಹಿಂಗಡೆ
ಬರಸಿಡಿಲಿನ ಭೀಷಣ ರೋಷದಲಿ
    ಅಟ್ಟಿ ತುಡುಕಲು ಬೆಳೆದಿತ್ತು!
ನುಗ್ಗುತಲೊದರಿದೆ "ಬೇಡ! ಒಲ್ಲೆ!
ಬಿಡುಗಡೆ ಸಾಕು! ಸೆರೆ ತೊರೆ ಬೇಕು!
    ಕೈಮುಗಿದೆನು ಬಿಡು, ಓ ಮುಕ್ತಿ!"
ಹಿಂಗಡೆ ಗದರಿತು "ಒಲ್ಲೆ! ಒಲ್ಲೆ!
ನಾ ಬಿಡೆನೆಂದೂ! ನುಂಗಲೆ ಬೇಕು!
    ಯುಗ ಯುಗ ಬಿಡದೋ ಯಮಶಕ್ತಿ!"
ಹಿಂದಕೆ ತಿರುಗದೆ ನೋಡದೆ ಓಡಿದೆ;
ಧಾವಿಸುವುದನೇ ಸಾಧನೆ ಮಾಡಿದೆ.
ಮಧುರ ಮೋಹನ ಮಾಯೆ ಮುಂಗಡೆ;
ಮುಕ್ತಿರಾಹುವ ಛಾಯೆ ಹಿಂಗಡೆ;
    ನಡು ನುಗ್ಗಿದೆನಾವೇಗದಲಿ,

ಮುಕ್ತಿರಾಹು

ಮೃತ್ಯುಕಾತರ ವೇಗದಲಿ!
ಇಂತು
ಶತಶತಮಾಸಗಳಿಂತು—
ಧುಮುಕಿದೆ!—ಘನತಿಮಿರದ ಪಾತಾಳದ
ಗರ್ಭಕೆ ಧುಮುಕಿದೆ!—ಅನಂತ ಕಾಲದ
ಸೃಷ್ಟಿಯ ಜಠರಕೆ ಧುಮುಕಿದೆ! ಧುಮುಕಿದೆ
ಪ್ರಜ್ವಲಿಸುವ ಮಹದುಲ್ಕೆಯ ತೆರದಲಿ,
ಜ್ವಾಲಾಮಯ ಲಾಂಗೂಲದ ಭರದಲಿ,
ಮೃತ್ಯುಕಾತರ ವೇಗದಲಿ!
ವೇಗ ವೇಗದಲಿ!

ಎನಿತು ಓಡಿದರೇನು ತಡೆವುದೆ?
ಎನಿತು ಬೇಡಿದರೇನು ಬಿಡುವುದೆ?
ಮುಕ್ತಿರಾಹುವು ನಿಷ್ಕರುಣಿ!
ಕರಾಳ ಬಲದಲಿ, ಕಠೋರ ಛಲದಲಿ,
ಕಲ್ಪಾಂತರಗಳು ಹೊರಳಿರೆ ಕೆಲದಲಿ,
ಬೆಂಬತ್ತಿತು ಅವಿರಾಮದಲಿ!
ಪ್ರಳಯದ ಕಾಮದಲಿ!
ಅಯ್ಯೋ ಎಲ್ಲಿ?
ಆಶ್ರಯವಿನ್ನೆಲ್ಲಿ?
ಅಟ್ಟಿ ಬಂದಿತು, ಬಂದಿತು ಛಾಯೆ,
ಮುಕ್ತಿರಾಹುವಿನನಂತ ಛಾಯೆ!
ತಪ್ಪಿಸಿಕೊಳ್ಳಲು ಜೀವವು ಮುದುಗಿತು;
ಕಟ್ಟಕಡೆಯಲಿ, ಕಡೆಯಲಿ ಹುದುಗಿತು—
ಜಡತೆಯ ಚಿರನಿದ್ರೆಯೊಳದ್ದಿ!

ಇಲ್ಲ!
ಇಲ್ಲಿಯು ಸುಖವಿಲ್ಲ!—
ಕ್ಷಣ ಕ್ಷಣದಲಿ ಕಣಕಣವನೆ ಹಿಡಿದು

ಕಿತ್ತೆಳೆಯಿತು ಜಡಮೃತ್ತನೆ ಕಡೆದು :
ಮುಕ್ತಿರಾಹುವು ಚೇತನ ಕಾಮಿ,
ಸುದೂರ ವಿಶ್ವದ ಚಿರನವಗಾಮಿ.
ಕರುಣೆಯೆ ಇಲ್ಲವೆ ರಾಹುವೆ ನಿನಗೆ ?
ಎನಿತುಂಡರು ಹೊಡೆ ತುಂಬದೆ ನಿನಗೆ ?
ಬಿಡು ; ಬಿಡು ನನ್ನನು ನಿದ್ದೆಯ ಸುಖಕೆ ;
ಸರ್ಪಚುಂಬನ ಕೊಡದಿರು ಮುಖಕೆ.—
ಮುಕ್ತಿರಾಹುಪ್ರೇಮಜ್ವಾಲೆ
ವ್ಯಷ್ಟಿಯ ಸೃಷ್ಟಿಗೆ ಬೇಳುವ ಲೀಲೆ !—
ಪೀಡಿಸೆ, ಕೋಟಲೆಗಾರದೆ ಮಣ್ಣು
ತುತ್ತತುದಿಯಲಿ ತೆರೆಯಿತು ಕಣ್ಣು !
ಮೃಣ್ಮಯ ನಿದ್ರೆಯ ಇಂಬನು ಬಿಟ್ಟು
ಸಸ್ಯಸ್ವಪ್ನಕೆ ಬಾಳನು ಕೊಟ್ಟು
    ಹೂವೆಲೆಗಳ ಸೌಂದರ್ಯದಲಿ
    ನೈಮರೆತೆನು ಮಾಧುರ್ಯದಲಿ :
ವಸಂತ ಋತುಗಳ ಕನಸನು ಕಂಡೆ ;
ಸೂರ್ಯೋದಯಗಳ ಮಧುವನು ಉಂಡೆ ;
    ಮುದಿಸಿದ ತುಂಬಿಯ ಗಾನದಲಿ
    ಕಿವಿ ತುಂಬಿತು ಸ್ವರಪಾನದಲಿ ;
ದಿನ ಬೆಳಗಾದರೆ ಹಸುರಿನ ಮೇಲೆ
ಮಿಸುನಿಯ ರನ್ನದ ಹಿಮಮಣಿ ಲೀಲೆ ;
ಕೊಂಬೆಯ ತೂಗುಯ್ಯಾಲೆಯಲಿ ಹಕ್ಕಿ
ಸುರಗಾನದ ಹೊಳೆ ಹರಿಸಿತು ಸೊಕ್ಕಿ ;
ಮಲಯಾದ್ರಿಯ ಮಂದಾನಿಲ ಬಂದು
ನವೀನ ಆಶಾಪಾಶವ ತಂದು
    ಬಿಗಿದನು ತನುಮನಗಳನೆಲ್ಲ !
    ಆಹಾ ! ಬಂಧನವದು ಬೆಲ್ಲ !—
ಹೂವಿನ ತುಟಿಯಲಿ ತುಂಬಿಯ ಕೆನ್ನೆಗೆ

## ಮುಕ್ತಿರಾಹು

ಮುತ್ತಿಡುತಿರೆ, ಚೆಲುವಿನ ಬನಕನ್ಯೆಗೆ
ಬಣ್ಣ ಬಣ್ಣದ ಸಿಂಗರ ಮಾಡಿ
ಆಮೋದಿಸುತಿರೆ,—ಹಿಂದಕೆ ನೋಡಿ !—
ಅಯ್ಯೋ, ಮುಕ್ತಿಯ ರಾಹುವು ಮತ್ತೆ !
ಅಯ್ಯೋ, ಅಮೃತದ ವಿಷದಿಂ ಸತ್ತೆ !

ಓಡಲು ಎಳಸಿದೆ, ಎಳಸಿದೆ, ಎಳಸಿದೆ ;
ಆಸೆಯ ಬಲಮೊಳೆ ರೆಕ್ಕೆಯು ಬೆಳೆಸಿದೆ !
ವಿಹಂಗವಾಗುತೆ ಮುಂದಕೆ ಹಾರಿದೆ,
ದೇಶದೇಶಗಳ ಮೂಲೆಯ ಸೇರಿದೆ ;
ಹಣ್ಣನು ತಿಂದು, ಕೊಳದಲಿ ಮಿಂದು,
ಹಾಡಿನ ಮದಿರೆಗೆ ಮನವನು ಮಾರಿದೆ.
—ಮರೆಯಾಯಿತು ಮುಕ್ತಿಯ ರಾಹು !
ಸ್ಥಾವರ ಹೋಗಿ ಜಂಗಮವಾಗಿ
ನಲಿದುಲಿದಾಡಿತು ಪ್ರಾಣದ ಯೋಗಿ.—
ಒಮ್ಮೆ ಪ್ರಭಾತದ ತರು ಶಿಖರದಲಿ
ಸ್ವರ್ಣೋಜ್ಜ್ವಲ ಸೂರ್ಯನ ಶಿಶುಕರದಲಿ
ಸಂಗೀತದ ಸಾಗರದಲಿ ತೇಲಿ
ಇರಲೈತಂದುದು ಬಾಣವ ಹೋಲಿ
ಅನಿಷ್ಟ ಮುಕ್ತಿಯ ಶನಿರಾಹು !
ಮತ್ತೆ ಓಡಿದೆ ! ಸಾಹಸ ಮಾಡಿದೆ !
ಆರಾರೆದೆಯನೊ ಆಶ್ರಯ ಬೇಡಿದೆ !
ನಿಂತೆಡೆಯಲ್ಲಿ ಕುಳಿತೆಡೆಯಲ್ಲಿ
ಎಲ್ಲಿಯು ಸುಖವಿಲ್ಲ ;
ಎಲ್ಲಿಯು ಬಿಡಲಿಲ್ಲ.
ಕಡೆಗೆ
ಕಟ್ಟ ಕಡೆಗೆ—

ಮಾನಸವನೆದೆಯಲಿ ಎಚ್ಚತ್ತೆ !
ಪಾರಾದೆನು ಮತ್ತೆ !

ಮಾನಸವನೆದೆ !—ಹಾ ! ಆ ನಾಮವೆ ಸುಧೆ !
ಇಲ್ಲಾದರು ಗೆದ್ದೆನು ಎಂದೆಳಸಿದೆ :
ಚಿಂತೆಗಳಿವೆ, ಭಾವಗಳಿವೆ, ಕಲೆಯಿದೆ ;
ಪ್ರೇಮದ ಮೋಹದ ಪ್ರಣಯದ ಬಲೆಯಿದೆ.
ಮುಕ್ತಿರಾಹುವ ತೊಲಗಿಸಿಕೊಳ್ಳಲು,
ಮುಕ್ತಿ ಚಿಂತೆಯನಾಚೆಗೆ ತಳ್ಳಲು,
ಮತ ಪೂಜೆಗಳಿವೆ, ಮಂತ್ರವಿದೆ;
ಶಾಸ್ತ್ರದ ಕಪಟ ಕುತಂತ್ರವಿದೆ.
ವೇದಾಂತಗಳಿವೆ, ಭಕ್ತಿಯಿದೆ ;
ವಾದಜಾಲವಿದೆ, ಯುಕ್ತಿಯಿದೆ !
ಮಾನಸವನೆದೆ !—ಹಾ ! ಆ ನಾಮವೆ ಸುಧೆ !
ಇಲ್ಲಾದರು ಗೆದ್ದೆನು ಎಂದೆಳಸಿದೆ !
ಶಿಶು ಲೀಲೆಗೆ ಕೈಹಾಕಿದ ಮೊದಲು :
ಮುಗ್ಧತೆಯನು ಹೊರಸೂಸುವ ತೊದಲು,
ಮೊಲೆವಾಲನು ಕುಡಿಕುಡಿಯುವ ಹಿಗ್ಗು,
ಅಲ್ಲದ ಸಲ್ಲದ ಬಯಕೆಯ ಸಿಗ್ಗು,
ನವನವ ಪರಿಚಯಗಳ ಸಂತೋಷ,
ಹೊಸಬಾಳಿನ ಹೊಸಹೊಸ ಆವೇಶ—
ನಾಸಿಂತಿರುತಿರೆ ಬಾಲ್ಯದ ಬಾಹು
ಮೆಲ್ಲಗೆ ತಪ್ಪಿತು ; ಮುಕ್ತಿಯ ರಾಹು
ಕಾಲವ ಕೆಣಕುತ ತಳ್ಳಿತು ಮುಂದೆ.
ಅರಿಯದವೊಲೆ ಬೆಂಬತ್ತಿತು ಹಿಂದೆ !—
ಅಡವಿಯ ತೊಡೆಯಲಿ, ತೃಣಶಯ್ಯೆಯಲಿ,
ಪುಷ್ಪಿತ ಲತೆಗಳ ತೂಗುಯ್ಯಾಲೆಯಲಿ,
ನದಿಗಿರಿನಿರ್ಝರ ಜಲಕಲತಾನದಿ,

ಪ್ರೇಮದ ಪ್ರೇತ

ಕರಗಿ ಹೋಯ್ತು !—
ಮಾಂಸ ಕರಗಿದ ದೇಹ,
ಅಸ್ಥಿಗೇಹ !
ಹೊಸೆದ ಒಡೆಜಡೆ ತಲೆಯು
ಕೊಳಕು ಒಲೆಯು !
ಕಣ್ಣು ಬತ್ತಿದ ಕೆನ್ನೆ
ಬರಿಯ ಸೊನ್ನೆ !
ವೈರಾಗ್ಯಕಿದೆ ಕೀರ್ತಿ,
ಪ್ರೇತ ಮೂರ್ತಿ ?—
ಇಂತು ಧ್ಯಾನದಿ ಮಗ್ನ,
ಇಂತು ಶೂನ್ಯದಿ ಲಗ್ನ
ಆ ಶ್ಮಶಾನದ ನಗ್ನ
ತಪೋಮೂರ್ತಿ !
ಪ್ರೇಮ ಪ್ರೇತದ ಸೊಲ್ಲು
ಚುಚ್ಚುತಿತ್ತು !
ತ್ಯಾಗ ಮೂರ್ತಿಯು, ಕಲ್ಲು
ಬೆಚ್ಚಿಬಿತ್ತು !
ಅಶರೀರ ಚುಂಬನವು
" ಬೇಕು ಅವಲಂಬನವು ! "
ಎಂದು ಕೂಗಿರೆ ಶಿವನು
ಕಂಪಿಸಿದನು !
ಒಡನೆ ಮದನನು ಒಲವ
ಸಿಂಪಿಸಿದನು !
ಹೃದಯ ಮರುಭೂಮಿಯಲಿ,
ವೈರಾಗ್ಯ ಸ್ವಾಮಿಯಲಿ,
ಪ್ರಚ್ಛನ್ನ ಕಾಮಿಯಲಿ
ವಿಶ್ವದಾಸೆಗಳೆಲ್ಲ
ಮೂಡಿದತ್ತು !

ನಕ್ಷತ್ರಗಳೊಡೆದುರುಳಲಿ! ವಾರಿಧಿ
ಮೇರೆಯ ತಪ್ಪಲಿ! ಆಕಾಶದ ನದಿ
ಅಪ್ಪಳಿಸಲಿ, ಭೂವಲಯವ ಕೊಚ್ಚಲಿ!
ಪ್ರಲಯಕೆ ತ್ರಿಭುವನ ಕಂಪಿಸಿ ಬೆಚ್ಚಲಿ!—
ಧುಮುಕುವೆ!—ಘನತಿಮಿರದ ಪಾತಾಳದ
ಗರ್ಭಕೆ ಧುಮುಕುವೆ! ಅನಂತ ಕಾಲದ
ಸೃಷ್ಟಿಯ ಜಠರಕೆ ಧುಮುಕುವೆ!—ಧುಮುಕುವೆ
ಪ್ರಜ್ವಲಿಸುವ ಮಹದುಲ್ಕೆಯ ತೆರದಲಿ,
ಜ್ವಾಲಾಮಯ ಲಾಂಗೂಲದ ಭರದಲಿ,
    ಮೃತ್ಯುಕಾತರ ವೇಗದಲಿ!
    ಶೂನ್ಯದ ತೃಷೆಯಾವೇಗದಲಿ!

# ಪ್ರೇಮದ ಪ್ರೇತ

ಹೃದಯ ಶ್ಮಶಾನದಲಿ
ವೈರಾಗ್ಯ ರಾತ್ರಿಯಲಿ
"ಮುತ್ತು ಬೇಕೇ ಮುತ್ತು ?
ಕೆಂದುಟಿಯ ಸವಿ ತುತ್ತು !"
ಎಂದು ಪ್ರೇಮದ ಪ್ರೇತ
ಚೀರುತಿತ್ತು !
ಒಂಡೆಗಳ ಬಾಯ್ದೆರೆದು,
ತರುಗರ್ಭಗಳ ಬಿರಿದು,
ಶೂನ್ಯವನೆ ಕರೆಕರೆದು,
ಎದೆಯ ಸುಡುಗಾಡಿನಲಿ
ತಾಗ್ಯದ ತಮಿಸ್ರದಲಿ
"ಮುತ್ತು ಬೇಕೇ ಮುತ್ತು ?
ಕೆಂದುಟಿಯ ಸವಿ ತುತ್ತು !"
ಎಂದು ಪ್ರೇಮದ ಪ್ರೇತ
ಚೀರುತಿತ್ತು !
ದೆಸೆಯು ದನಿಯನು ಮಸೆದು
ಬೀರುತಿತ್ತು !

ಅದನು ನಡುಗಿತು ಕೇಳಿ
ಜಗವು ಕಂಪನ ತಾಳಿ,
ರೋದನದ ಹೊನಲಲ್ಲಿ
ಮುಳುಗಿ ತೇಲಿ !
ಫಲವನುಣ್ಣದ ಒಲ್ಮೆ
ಕೈಗೂಡದಿಹ ನಲ್ಮೆ

ಚೀರುತಿರೆ ಬಾಯಾರಿ
ಪ್ರೀತಿರಸವನು ಕೋರಿ
ಜೀವನವೆ ಕಂಪಿಸಿತು
ಮರುಕ ತೋರಿ!
ವೈಕುಂಠ, ಕೈಲಾಸ,
ನರಕ, ಇಂದ್ರನಿವಾಸ,
ಎಲ್ಲ ಮೊಗಬಾಡಿದುವು;
ಎಲ್ಲ ಅಲುಗಾಡಿದುವು
ಬೆಚ್ಚಿ ಬಿದ್ದು!
ಪ್ರೇಮ ಪ್ರೇತದ ವಾಣಿ
ಪ್ರಳಯದುಲ್ಕೆಯ ವೇಣಿ!
ಸೃಷ್ಟಿಶಕ್ತಿಯ ಎದೆಯು
ಹಿರಿಯ ಬಯಕೆ
ಸಲ್ಲದಿರೆ, ಅದು ಚಿಕ್ಕ
ಭುವನಲಯಕೆ!

ಪ್ರೇಮ ಪ್ರೇತದ ಸೊಲ್ಲ
ಕೇಳಿ ಬೆಚ್ಚುತ ಎಲ್ಲ
ಮೂಕವಾಯ್ತು!
ಮುಂದೆ ಗತಿ ಏನೆಂದು
ಶೋಕವಾಯ್ತು.

ಮಸಣದಾ ಮೂಲೆಯಲಿ
ವೈರಾಗ್ಯಸಿಂಧು ಶಿವನ
ರುದ್ರ ಮೂರ್ತಿಯ ತಪಕೆ
ಭಂಗವಾಯ್ತು!
ವೈರಾಗ್ಯದಾ ಮಂಜು
ಗಡ್ಡೆಗಟ್ಟಿದ ನಂಜು

## ಮಲ್ಲಗೀತೆ

ಬಾಳು ಮುಚ್ಚುವ ಮಣ್ಣು,
ಸಾವು ಬಿಚ್ಚುವ ಕಣ್ಣು!
ಇಲ್ಲಿ ಕಂಡರಿಯದಿಹ ಮಹಿಮೆಯನು ನಾವಲ್ಲಿ ಕಾಣಲಹುದು!

ಸೂರ್ಯಚಂದ್ರರ ಗತಿಗೆ
ಕಣ್ಣಾಹ ಜಗನ್ಮತಿಗೆ
ನಿನ್ನ ಗತಿ, ನಿನ್ನ ಮತಿ, ನಿನ್ನ ಸಾಹಸಕೆ ಕಣ್ಣಾಗಲರಿದೇ?
ಭಯವ ಬಿಡು; ನಲವಿಂದೆ
ಹಾಡುತ್ತೆ ನಡೆ ಮುಂದೆ.
ಸಂದೆಯದ ಪುಸಿತೊಟ್ಟಿಲನು ಕಟ್ಟಿ ಮಲಗಿ ಜೋಲದಿರು ಬರಿದೆ!

ಬೈಗುಗೆಂಪುರಿಯಲ್ಲಿ
ಸುಡಲಿ ಸಂಶಯವಲ್ಲಿ!
ಹುಣ್ಣಿಮೆಯ ರಾತ್ರಿಯಲಿ ಹೊರಗೆ ಬಾ ನೋಡು! ಸಂದೆಯದ ಮಚ್ಚು
ಎಲ್ಲಾದರಿಹುದೇನು?
ಎಳ್ಳಾದರಿಹುದೇನು?
ಜಗದ ನಗೆವೊನಲಿನಲಿ ಕೊಚ್ಚಿಹೋಗುವುದು ಸಂದೆಗದ ಹುಚ್ಚು!

ಏಳು, ಮಲ್ಲನೆ ಏಳು!
ಮನವ ಮುದದಲಿ ತೇಲು!
ಕೋಗಿಲೆಗಳುಲಿಯುತಿವೆ ಪಲ್ಲವಿತ ಚೈತ್ರಕಾನನದಿ ಕೇಳು:
ಸಾಹಸವೆ ಸವಿ ಬಾಳು!
ಸಂದೆಯವೆ ಕಹಿ ಕೂಳು!
ನಂಬುಗೆಯ ಸುಗ್ಗಿಯನು ನೆಟ್ಟು ಸಂದೆಯದ ಮಾಗಿಯನು ಕೀಳು!

ನೋಡು, ಎಂತಿದೆ ನುಸಿಲು!
ಹಸುರ ಮೇಲೆಳೆಬಿಸಿಲು
ಮಲಗಿಹುದು ಲೀಲೆಯಲಿ ವೈಮರೆತ ಮೋಹನದ ಶಿಶುವಿನಂತೆ!

ಪ್ರೇಮ ಪ್ರೇತದ ಮುತ್ತು
ತುಟಿಗೆ ಬಿತ್ತು !
ತ್ಯಾಗ ಪ್ರೇತದ ಮುಂದು
ಪ್ರೇಮ ಪ್ರೇತವು ನಿಂದು
ತಪ್ಪಿದತ್ತು !
ಎರಡು ಎಲುಬಿನ ಗೂಡು
ಒಂದಾದೊಡನೆ ನೋಡು :
ಹಿಂದಿನಾ ಸುಡುಗಾಡು
ಬೃಂದೆಯಾಯ್ತು !
ಮೋಹ ತ್ಯಾಗದೊಳಗಾಗಿ,
ಸನ್ನಿ ಸೊಬಗಿನೊಳಗಾಗಿ
ಒಂದೆಯಾಯ್ತು !
ಆ ಇರುಳು ಹಗಲಾಯ್ತು,
ಆ ಮಸಣ ಬನವಾಯ್ತು,
ಆ ದುಃಖ ಸುಖವಾಯ್ತು ;
ಮಾಘಮಾಸವು ಹೋಗಿ
ಚೈತ್ರವಾಯ್ತು !
ಕೃಷ್ಣ ರಾಧೆಯರಾಗಿ
ನೃತ್ಯವಾಯ್ತು !
ಪ್ರೇಮ ಪ್ರೇತದ ಬಯಕೆ
ಸಫಲವಾಯ್ತು ;
ತ್ಯಾಗ ಭೂತದ ತಪಕೆ
ಸಿದ್ಧಿಯಾಯ್ತು !

ಪ್ರೇಮ ಪ್ರೇತದ ಮುತ್ತು
ತ್ಯಾಗದಧರಕೆ ತುತ್ತು :
ಆದೊಡನೆ ಮೂಡಿತ್ತು—
ಮನ್ಮಥ ರತಿ !

## ಪ್ರೇಮದ ಪ್ರೇತ

ಎರಡು ಎಲುಬಿನ ಗೂಡು
ಒಂದಾದೊಡನೆ ನೋಡು :
ರೂಪರಾಶಿಯ ಜೋಡು—
ಶಿವಪಾರ್ವತಿ !

# ಕಲ್ಕಿ

ನಿದ್ದೆಯು ಲೋಕದಿ ಕನಸಿನ ಜಾದಿ.
ತಿರುಗಿದೆ, ತೊಳಲಿದೆ. ತಪ್ಪಿತು ಹಾದಿ!
ಮುಂದೆ ಕಾಣಿಸಿತೊಂದು ಅರಣ್ಯ,
ಅನಂತವಾದುದು ವನವಿಸ್ತೀರ್ಣ.
ಹೆಮ್ಮರಗಳು ಕಿಕ್ಕಿರಿದುವು ಅಲ್ಲಿ,
ಬಿಡುವಿಲ್ಲದೆ ಹೆಣೆದಿದ್ದುವು ಬಳ್ಳಿ;
ಮುಳ್ಳಿನ ಪೊದೆಗಳು, ಗರಗಸವಳ್ಳಿ,
ಪ್ರೇತದಂತೆ ಪಾಪಾಸಿನ ಕಳ್ಳಿ!
ನುಗ್ಗಿದೆ ನಾನಾ ಹಳುವಿನಲಿ,
ಆ ಕನಸಿನ ಹೆಗ್ಗಾಡಿನಲಿ.
ಅಲ್ಲಿದ್ದುದು ಬೆಳಕೆಂಬುವುದಲ್ಲ,
ಕತ್ತಲು ಅಲ್ಲ!
ಬೆಳಕೋ ಕತ್ತಲೊ ಶಿವನೇ ಬಲ್ಲ!
ಶಿವನೇ ಬಲ್ಲ!
ಪ್ರೇತಗಳಂದದಿ ಭೀತಿಯ ಛಾಯೆ
ಸುಳಿಸುಳಿದಾಡಿತು ಅಲ್ಲಿ,
ಆ ಘೋರ ಕಾನನದಲ್ಲಿ!
ನಡೆದೇ ನಡೆದೇ ನಡೆದೂ ನಡೆದೆ
ಸಾಹಸ ಬಿಡದೆ, ಎದೆಗೆಡದೆ.
ಸುತ್ತಲು ಮೌನ!
ಶ್ಮಶಾನ ಮೌನ!
ಕಾಡನು ದಾಟಿದೆ: ಮುಂಗಡೆ ಬೆಟ್ಟ.
ಶಿಖರವೊ ನಿಂತಿದೆ ಮುಗಿಲಿನ ಮುಟ್ಟ!
ಹತ್ತೀ ಹತ್ತೀ ಹತ್ತೀ ಹತ್ತಿ
ಕಡೆಯಲಿ ಸಿಕ್ಕಿತು ನಡುನೆತ್ತಿ!

## ಕಲ್ಕಿ

ನೋಡಿದೆನಲ್ಲಿ,
ನಡುನೆತ್ತಿಯಲಿ!—
ಯಾವುದೊ ಊರು? ಆ ಊರು!
ಬರಿ ಮಾಯದ ಊರು!
ಧನಿಕರ ಮನೆಗಳು ಒಂದೆಡೆ ನಿಂತಿವೆ,
ಬಡವರ ಗುಡಿಸಲು ಒಂದೆಡೆ ನಿಂತಿವೆ.
ಜ್ಯೋತಿಯ ಮಣಿದೀಪಗಳಲ್ಲಿ;
ಕತ್ತಲು, ಕಗ್ಗತ್ತಲು ಇಲ್ಲಿ!
ಹಾಡಿನ ಸುಣ್ದನಿಯತ್ತ,
ಗೋಳಿನ ಸೀಳ್ದನಿಯಿತ್ತ!
ಕೂಳನು ಹೆಮ್ಮೆಗೆ ಎಸೆಯುವರಲ್ಲಿ,
ಹೊಟ್ಟೆಗೆ ಇಲ್ಲದೆ ಕೊರಗುವರಿಲ್ಲಿ!
ಆ ಕಡೆ ಉದ್ಯಾನ,
ಈ ಕಡೆ ಶ್ಮಶಾನ!
ಪೀತಾಂಬರಗಳ ತೊದೆಯುವರಲ್ಲಿ,
ಕೌಪೀನಕೆ ಚಿಂದಿಯು ಸಿಗದಿಲ್ಲಿ!
ನೋಡುತ ನೋಡುತ ನೋಡುತ್ತಿದ್ದೆ;
ನೋಡುತ್ತಿರೆಯಿರೆ ಬೆಚ್ಚಿ ಬಿದ್ದೆ:
ಬಡಬಗ್ಗರ ಜಠರಾಗ್ನಿಯು ಎದ್ದು,
ಗುಡಿಸಲುಗಳಿಗೇ ಬೆಂಕಿಯು ಬಿದ್ದು,
ಧಗಧಗ ಧಗಧಗ ಹೊತ್ತಿದುದು,
ಭುಗುಭುಗಿಲೆನ್ನುತ ಮುತ್ತಿದುದು!
ಮುಗಿಲಿನ ವರೆಗೂ, ಬಾನಿನ ವರೆಗೂ,
ದಿಕ್ಕುದಿಕ್ಕುಗಳ ಬಟ್ಟಿನ ವರೆಗೂ,
ಬಡವರ ಬೆಂಕಿಯು ನಾಲಗೆ ಚಾಚಿ
ಶ್ರೀಮಂತರನಪ್ಪಿತು ಬಾಚಿ!
ಬಡವರ ಸಿಟ್ಟದು ಏನು ಪಿಶಾಚಿ?
ಬಡಬಾಗ್ನಿಯು ತಲೆತಗ್ಗಿತು ನಾಚಿ!

ಶ್ರೀಮಂತರ ಸೌಧಂಗಳ ನೆತ್ತಿ
ಸೀದುದು ಬಡಹೊಟ್ಟೆಯ ಉರಿಹತ್ತಿ.
ದೂರದ ಆ ಗಿರಿಶಿಖರದ ಮೇಲೆ
ನನಗೂ ತಟ್ಟಿತು ಬೆಂಕಿಯ ಜ್ವಾಲೆ!
ಕೇಳಿಸಿತೊಡನೆಯೆ ಹಾಹಾಕಾರ!
ಮಕ್ಕಳುಮರಿಗಳ ಚೀತ್ಕಾರ!
ಗರ್ಭಿಣಿ ಸ್ತ್ರೀಯರು, ಬಾಣಂತಿಯರು,
ನವ ವಧುಗಳು ಮೇಣ್ ಶ್ರೀಮಂತೆಯರು,
ಹುಡುಗರು, ಮುದುಕರು, ಕುಂಟರು, ಕಿವುಡರು,
ಬಡವರ ಗೋಳನು ಕೇಳದ ಕಿವುಡರು,
ಹೊಟ್ಟೆಯ ಪಾಡಿಗೆ ಕಾವಿಯನುಟ್ಟು
ಬಡವರ ಹಸಿವೆಗೆ ಮೌಢ್ಯವ ಕೊಟ್ಟು
ಸುಖಸಂಪತ್ತನು ಕೊಂಡವರು,
ಮೃಷ್ಟಾನ್ನವನೇ ಉಂಡವರು,
ಗುರುಗಳು, ಶಿಷ್ಯರು, ಮನೆಗಳು, ಮಠಗಳು,
ಎಲ್ಲರು ಬೆಂದರು ಬಡಬಾಗ್ನಿಯಲಿ,
ಬಡವರ ಉಗ್ರ ಜಠರಾಗ್ನಿಯಲಿ!
ಬಡವನ ಜಠರಾಗ್ನಿಯೆ ಬಡಬಾಗ್ನಿ!
ಬಡವನೆ ಕಲಿಯುಗದಂತ್ಯದ ಕಲ್ಕಿ!
ನೋಡುತಲಿದೆ;
ನೋಡುತಲಿದೆ!
ಕಣ್ಮರೆಯಾಯಿತು ಆ ದೃಶ್ಯ!
ಏನಿದು ಈ ದೃಶ್ಯ?
ರಕ್ತದ ಜಲಪಾತ!
ನರಮಾಂಸದ ನಾತ!
ಧುಮುಧುಮುಕುತಲಿದೆ ರಕ್ತದ ರಣಧುನಿ!
ಹೊರ ಹೊಮ್ಮುತ್ತಿದೆ ನರರಾರ್ತಧ್ವನಿ!
ಗಗನವು ರಕ್ತ! ಭೂಮಿಯು ರಕ್ತ!

### ಕಲ್ಕಿ

ನೋಡಿದರೆತ್ತಲು ರಕ್ತ ! ರಕ್ತ !
ಅಯ್ಯೋ ರಕ್ತ !
ಧುಮುಕುವ ಶೋಣಿತ ಗಿರಿಝರಿಯಲ್ಲಿ,
ನರ ರುಂಡಗಳು
ನರ ಮುಂಡಗಳು
ಮುಂಗಾರ್‍ಗಾಲದ ಒಲ್ಲರಿಯಲ್ಲಿ
ಆಲಿಯ ಕಲ್ಲುಗಳುರುಳುರುಳ್ವಂತೆ
ಧುಮುಕುತಲಿರುವುವು ! ಉಂಡೆಗಳಂತೆ
ಧುಘುಂ ಧುಘುಂ ಧುಘುಮ್ಮೆನೆ ಬಿದ್ದು
ಹಾರುತಲಿವೆ ಬಿಸಿನೆತ್ತರು, ಸದ್ದು !
ಸುಂದರಿಯರ ತಲೆಮುಂಡೆಗಳು,
ಶ್ರೀಮಂತರ ನೆಣದುಂಡೆಗಳು,
ಪಾಪದ ದೇಹ, ಪುಣ್ಯದ ದೇಹ,
ಗುಡಿಗೋಪುರಗಳು, ಧರ್ಮದ ಗೇಹ,
ತೇಲಿ, ತೇಲಿ, ತೇಲಿ, ತೇಲಿ,
ನುಗ್ಗುತಲಿವೆ ಕನಕಡ್ಡಿಯ ಝೋಲಿ !
ಯಾರವನಲ್ಲಿ ? ದೂರದಲಿ
ಧಾವಿಸಿ ಬರುವನು ಕ್ರೌರ್‍ಯದಲಿ !
ಅಸ್ಥಿ ಪಂಜರದಶ್ವವನೇರಿ,
ಬೆಳ್ಳಗೆ ಚಿಲಿಯುವ ದಾಡೆಯ ತೋರಿ,
ಅಸ್ಥಿ ಪಂಜರದಾಳವನು !
ಪ್ರೇತ ಸ್ವರೂಪಿಯದಾರವನು ?
ಬಲಗಡೆ ಕೈಯಲಿ ಮಿಂಚಿನ ಕತ್ತಿ !
ಎಡಗಡೆ ಕೈಯಲಿ ಸಿಡಿಲಿನ ಬುತ್ತಿ !
ಎಲುಬಿನ ಕುದುರೆ ! ಎಲುಬಿನ ಆಳು !
ಇವನೆಯೆ ಕಲ್ಕಿ ? ಒಡವರ ಬಾಳು !
ಮೂರ್ತಿವೆತ್ತಿಹ ಬಡವರ ಗೋಳು !
ನೋಡುತಲಿದ್ದೆ ;

ಕೇಳುತಲಿದ್ದೆ !
" ಹಸಿವೇ ! ದಾಹಾ ! " ಎನ್ನುತ ಒಂದು,
" ರಕ್ತಾ ! ರಕ್ತಾ ! ರಕ್ತಾ ! " ಎಂದು
ನೆತ್ತರು ಹೊಳೆಯಲಿ ಧುಮುಕಿದನು,
ಕುದುರೆಯೊಡನೆ ಧುಮ್ಮಿಕ್ಕಿದನು !
ಕುಡಿದನು ರಕ್ತವ ಮೊಗೆಮೊಗೆದು,
ತಿಂದನು ತಲೆಗಳ ತೆಗೆತೆಗೆದು !
ಎಲುಬಿನ ಕುದುರೆಯು ಕೆನೆಯುತ್ತಿತ್ತು ;
ನಾದವು ಬೊಮ್ಮವ ಜರಿವಂತಿತ್ತು !
ಎಲುಬಿನ ಮೂರ್ತಿಯು ಗಹಗಹಿಸಿತ್ತು ;
ಗುಡುಗಿನ ಮಾಲೆಯೆ ಪೊರಮಡುತಿತ್ತು !
ಕುದುರೆಯು ಕುಡಿದೂ, ಆಳೂ ಕುಡಿದೂ,
ತಿಂದರು ಶವಗಳ ಲರಿಲರಿ ಕಡಿದೂ !
ಬತ್ತಿತು ರಣಧುನಿ, ಇನ್ನೂ ದಾಹ !
ಮುಗಿದುವು ಹೆಣಗಳು, ಇನ್ನೂ ಹಸಿವೆ !
ಬಡವರ ಗಂಟಲ ಬೇಗೆಯ ದಾಹ !
ಬಡವರ ಹೊಟ್ಟೆಯ ಬೆಂಕಿಯ ಹಸಿವೆ !
ತುಂಬದು ಹೊಟ್ಟೆ ;
ತುಂಬದು ಹೊಟ್ಟೆ !
ಕೆಟ್ಟೆ ! ಕೆಟ್ಟೆ !
ಅಯ್ಯೋ ಕೆಟ್ಟೆ !
ನೋಡಿದನೆನ್ನಂ ಬೆಟ್ಟದ ಮೇಲೆ !
ಬರುತಿಹನಯ್ಯೋ ! ಒಲ್ಲೆ ! ಒಲ್ಲೆ !
ನೋಡುತಲಿದ್ದೆ !
ಕಂಪಿಸಿ ಬಿದ್ದೆ !
" ಕಲ್ಕಿ ! ಕಲ್ಕಿ ! " ಎನ್ನುತ ಚೀರಿ
ಕನಸೊಡೆದೆದ್ದೆ !
ಇನ್ನೆಲ್ಲಿಯ ನಿದ್ದೆ ?

# ಅವತಾರ

—ಮತ್ತೆ ಇದೇನು?
ಎಂದೆಂದಿಗು ನಿನಗಿದೆ ಗತಿಯೇನು?—

ಶಿಲುಬೆಯ ಮೇಗಡೆ ನೇತಾಡುತ್ತಿಹೆ!
ಮುಳ್ಳಿನ ಮುಡಿಯನು ಇನ್ನೂ ಹೊತ್ತಿಹೆ!
ಕೈಕಾಲೆದೆಯಲಿ ಕಬ್ಬಿನ ಕೂರ್ಮೊಳೆ!
ಹರಿಯುತ್ತಿದೆ ಕೆನ್ನೀರಿನ ಬಿಸಿಹೊಳೆ!
ನಿನಗಿನ್ನೂ ತಪ್ಪದೆ ಈ ಗೋಳು?
ನಿನಗೆಂದೆಂದೂ ಶಿಲುಬೆಯ ಬಾಳು?
ಓ ಕ್ರಿಸ್ತನೆ ಕರುಣಿಸಿ ಹೇಳು!—

ನೋಡದೊ ಚಲಿಸುತ್ತಿದೆ ಕ್ರಿಸ್ತನ ಶವ!
ನುಡಿಯುತ್ತಿದೆ ಆಲಿಸು! ಶಿವಾ ಶಿವ!
ಸೂಸಿದೆ ಕನಿಕರದಲಿ ಕಣ್ಣೀರು,
ಕ್ರಿಸ್ತನು ಕ್ಷಮೆಯಾ ತವರೂರು:

"ದಿನದಿನ ದಿನವೂ ಶಿಲುಬೆಯ ನೇರಿ,
ಕ್ಷಣಕ್ಷಣ ಕ್ಷಣವೂ ರಕ್ತವ ಸೋರಿ,
ಲೋಕಕೆ ಪ್ರೇಮ ಅಹಿಂಸೆಯ ಸಾರಿ,
ಮನುಜರ ಪಾಪವ ನಾ ತೊಳೆಯುತ್ತಿಹೆ;
ಸಾವಿರ ಸಲ ನಾ ಹುಟ್ಟಿಹೆ, ಸತ್ತಿಹೆ!
ದಿನವೂ ದಿನವೂ ನಿಂದಿಸಿ ನೋಯಿಸಿ,
ದಿನದಿನ ದಿನವೂ ಹಂಗಿಸಿ ಸಾಯಿಸಿ
ಆರಾಧಿಸುವರು ಮೂದಲಿಸಿ!

ಅಂದು ಯಹೂದ್ಯರು ಮಾತ್ರವೆ ಅಲ್ಲ
ನನ್ನನ್ನು ಶಿಲುಬೆಗೆ ಹಾಕಿಹರು ;
ಇಂದು ಜಗತ್ತಿನ ಮಾನವರೆಲ್ಲ
ಈಗತಿಗೆನ್ನನು ನೂಕಿಹರು !
ಎಲ್ಲರ ಎದೆಯೊಳು ಶಿಲುಬೆಯ ಹೊತ್ತು,
ದಿನದಿನ ಹುಟ್ಟಿ, ದಿನದಿನ ಸತ್ತು,
ಕ್ಷಣಕ್ಷಣದಲಿ ಅವತರಿಸುವೆ ನಾನು !
ಮಿಥ್ಯಾಭೂತಕೆ ನಿತ್ಯವು ದೇವರು
ತೆತ್ತಿಹ ಸತ್ಯದ ಒಲಿ ನಾನು !

ಒಡಬಗ್ಗರ ಗುಡಿಸಲುಗಳ ಮುರಿದು
ಗುಡಿಗಳ ಕಟ್ಟುವರೆನಗಾಗಿ !
ನರಳುತ್ತಿರೆ ನಾ ನೆತ್ತರು ಹರಿದು
ಸಂಗೀತದಿ ನನ್ನನು ಕೂಗಿ
ಪ್ರಾರ್ಥನೆ ಮಾಡಿದೆವೆಂದೆನ್ನುವರು,
ರಕ್ತ ಮಾಂಸವನೆ ತಿನ್ನುವರು !
ನನ್ನ ಧರ್ಮದಾ ಹೆಸರನೆ ಹೇಳಿ
ನನ್ನನೆ ಶಿಲುಬೆಗೆ ಕುತ್ತುವರು ;
ನನ್ನ ರಕ್ತದಾ ಹೊಳೆಯೊಳೆ ತೇಲಿ
ಹೊಸ ಹೊಸ ಶಿಲುಬೆಯ ಕೆತ್ತುವರು !
ಮಾನವರರಿಯರು ಕ್ಷಮಿಸೈ ತಂದೆ ;
ಅಂದೂ ಇಂದೂ ಎರಡೂ ಒಂದೇ !
ಕ್ರೈಸ್ತ ಯಹೂದ್ಯರು ಮುಸಲರು ಹಿಂದೂ
ಎಲ್ಲರು ನನ್ನವರೇ ಎಂದೆಂದೂ ! ''

ಆದರದೆಲ್ಲಿ ?
ಕ್ರಿಸ್ತನ ಶಿಲುಬೆಯ ಕಣಸು ಅದೆಲ್ಲಿ ?—

## ಅವತಾರ

ಮತ್ತೆ ಇದೇನು?
ಯಾವಾಗಲು ನಿನಗಿದೆ ಗತಿಯೇನು?—

ಕಗ್ಗತ್ತಲ ಪಾತಾಳದ ಗವಿಯಲಿ,
ನಡುನಡುಗುತ್ತಿಹ ಕಿರಣಚ್ಛವಿಯಲಿ,
ಪ್ರವಹಿಸ ರಕ್ತದ ಧುನಿಯಲಿ ತೇಲಿ
ನುಗ್ಗುತ್ತಿದೆ ಅದೊ ಬೆಂಕಿಯ ದೋಣಿ!
ಅದರಲಿ ಮಾನವ ಮೂರ್ತಿಯ ಹೋಲಿ
ಕುಳಿತಿದೆ ಅದೊ ಅವತಾರ ಪ್ರಾಣಿ!
ಎದೆಯಲಿ ಅದೊ ಚುಚ್ಚಿದ ಬಾಣ!
ನೆತ್ತರು ಚಿಮ್ಮುತ್ತಿದೆ ಕಾಣ!
ತುಡಿಯುತ್ತಿದೆ ಪ್ರಾಣ!
ನೋವಿನ ಪಾಡು
ನೊಗವದು, ನೋಡು!—

ಹರಿಯುತ್ತಿರೆ ಶೋಣಿತ ವೇಣಿ,
ತೇಲುತ್ತಿರೆ ಬೆಂಕಿಯ ದೋಣಿ,
ಅವತಾರನ ಎದೆಯನು ಕಣೆ ಚುಚ್ಚಿರೆ,
ರಕ್ತದ ಹೊಳೆಯೋ ಕ್ಷಣಕ್ಷಣ ಹೆಚ್ಚಿರೆ,
ಯುಗಯುಗ ಯುಗವೂ ಹಗಲೂ ಇರುಳೂ
ಬೇಯುತ್ತಿದೆ ಜಗದೀಶನ ಕರುಳು!—

—ಅಯ್ಯೋ ಇದೇನು?
ನಿನಗೆಂದೆಂದೂ ಇದೆ ಗತಿಯೇನು?—

# ಮೊದಲ ಚರಣಗಳು

ಪುಟ.

| ಪುಟ | ಪಂಕ್ತಿ | ಅಶುದ್ಧ | ಶುದ್ಧ |
|---|---|---|---|
| ೨೦ | ೧೧ | ಕೋಟ್ಯನು ಕೋಟಿ | ಕೋಟ್ಯನುಕೋಟಿ |
| ೩೦ | ೨೨ | ನಿಷ್ಕರುಣ | ನಿಷ್ಕರುಣೆ |
| ೩೪ | ೧೪ | ಬರುವ | ಬರವ |
| ೪೮ | ೨ | ಒಣ್ಣಾಗಿ | ಒಣ್ಣಿಗಿ |
| ೬೩ | ೧೧ | ತಾಗ್ಯದ | ತ್ಯಾಗದ |
| ೬೩ | ೧೮ | ನುಡುಗಿತು | ನಡುಗಿತು |

ಕೆ. ವಿ. ಪುಟ್ಟಪ್ಪನವರ

# ರ ಕ್ತಾ ಕ್ಷಿ

ಕವಿಗಳ ಭಾವಚಿತ್ರದೊಡನೆ

ಕ್ರೌ. ಅ. ೧೮ + ೨ + ೧೫೮ ಪುಟಗಳು    ಬೆಲೆ. ಸಾದಾ ಪ್ರತಿ ರೂ. ೧-೮-೦
ಕ್ಯಾಲಿಕೊ ಪ್ರತಿ ರೂ. ೨-೦-೦

ಮಲೆನಾಡಿನಲ್ಲಿ ಪೂರ್ವದಲ್ಲಿ ಹೆಸರಾಂತ ರಾಜ್ಯಗಳಲ್ಲಿ ನಗರ ಸಂಸ್ಥಾನವು ಪ್ರಮುಖವಾದುದು. ವೈಭವದಿಂದ ಮೆರೆದ ಆ ರಾಜ್ಯದ ಅವಸಾನಕಾಲದ ಚರಿತ್ರೆಯೇ ಈ ನಾಟಕದ ಕಥಾವಸ್ತು. ಇಂದಿನ ಚರಿತ್ರೆಗಳಲ್ಲಿ ನಿರ್ಜೀವರಾಗಿ, ಕೇವಲ ಹೆಸರುಗಳಾಗಿ ತೋರುವ ಬಸವನಾಯಕ, ಚೆಲುವಾಂಬೆ, ನಿಂಬಯ್ಯ, ಲಿಂಗಣ್ಣ ಮಂತ್ರಿ, ಹೈದರಾಲಿ ಮೊದಲಾದ ಪುರಾತನ ವ್ಯಕ್ತಿಗಳಿಲ್ಲಿ—ಶ್ರೀಮಾನ್ ಪುಟ್ಟಪ್ಪನವರ ಕಾವ್ಯರಂಗದಲ್ಲಿ—ನೂತನ ಜೀವವನ್ನು ಹೊಂದಿ, ಚರಿತ್ರೆಯಲ್ಲಿ ಕಾಣದಿದ್ದರೂ ಕವಿನಿರ್ಮಿತರಾಗಿ ಸಜೀವರಾಗಿರುವ ಇತರ ವ್ಯಕ್ತಿಗಳೊಡನೆ ವ್ಯವಹರಿಸಿ; ಸುಮಾರು ಇನ್ನೂರು ವರುಷಗಳ ಹಿಂದೆ ಅರಮನೆಯ ಪಿತೂರಿ, ಕುಯುಕ್ತಿ, ದ್ರೋಹ, ದ್ವೇಷಾಸೂಯೆಗಳು, ವಿಷಯಾಭಿಲಾಷೆ, ಹೇಡಿತನಗಳು—ಇವುಗಳಿಗೆ ತುತ್ತಾಗಿ, ಶತ್ರುವಿನ ಪಾಲಾದ ನಗರದ ರುದ್ರನಾಶವನ್ನಿಲ್ಲಿ ಬಹು ಹೃದಯಂಗಮವಾಗಿ, ರಸಭರಿತವಾಗಿ ಅಭಿನಯಿಸುವರು. ಕನ್ನಡ ಸಾಹಿತ್ಯದಲ್ಲಿ ಉತ್ತಮವಾದ ಪ್ರತಿಭಾಸಂಪನ್ನವಾದ ಮಹತ್ವಾದ ಇಂತಹ ಐತಿಹಾಸಿಕ ನಾಟಕವು ಬೇರೊಂದು ದೊರೆಯುವುದು ದುರ್ಲಭವು. ಸರಳ ರಗಳೆಯೂ ಮೃದು ಗದ್ಯವೂ ಬಹು ಮನೋಜ್ಞವಾಗಿ ಬೆರೆತು ಈ ನಾಟಕವನ್ನು ಅಪೂರ್ವ ಶೋಭಾಮಯವಾಗಿ ಮಾಡಿರುತ್ತವೆ. ಶ್ರೀಮಾನ್ ಎ. ಆರ್. ಕೃಷ್ಣಶಾಸ್ತ್ರಿ, ಎಂ.ಎ., ಯವರು ಈ ಗ್ರಂಥದ ವಿಷಯದಲ್ಲಿ ಮುನ್ನುಡಿಯಲ್ಲಿ ಹೀಗೆಂದು ಹೇಳಿರುವರು—

“ಇದು ಕನ್ನಡಕ್ಕೆ “ಹ್ಯಾಂಲೆಟ್” ಕಾವ್ಯ. ಇಂಗ್ಲಿಷಿನಲ್ಲಿ “ಹ್ಯಾಂಲೆಟ್” ಹುಟ್ಟಿದಾಗ ಅದರ ಸಾಹಿತ್ಯವು ಅತ್ಯುನ್ನತ ಶಿಖರವನ್ನೇರಿತು. “ರಕ್ತಾಕ್ಷಿ” ಯಂಥ ಶ್ಲಾಘ್ಯಸ್ವತಂತ್ರ ಐತಿಹಾಸಿಕ ನಾಟಕವು ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹುಟ್ಟಿದಾಗ ಅದರ ಮಟ್ಟವು ಬಹು ಎತ್ತರಕ್ಕೆ ಏರಿರುವುದೆನ್ನುವುದರಲ್ಲಿ ಸಂದೇಹವಿಲ್ಲ.... ಇಂಥ ಒಳ್ಳೆಯ ಕೃತಿಯನ್ನು ಪ್ರಕಟಿಸುವ ಸುಯೋಗ ಲಭಿಸಿದ್ದಕ್ಕಾಗಿ ನಾನು ಶಿವಮೊಗ್ಗೆಯ ಕರ್ಣಾಟಕ ಸಂಘವನ್ನು ಅಭಿನಂದಿಸುತ್ತೇನೆ.”

---

**ಕರ್ಣಾಟಕ ಸಂಘ, ಶಿವಮೊಗ್ಗ**

## ಪಂಡಿತ ಕುಕ್ಕೆ ಸುಬ್ರಹ್ಮಣ್ಯಶಾಸ್ತ್ರಿಗಳ

# ಕನ್ನಡ ಮೇಘಸಂದೇಶ

ಕ್ರೌ. ಅ. ೪೮ ಪುಟಗಳು ಬೆಲೆ ೦—೬—೦

ಕಾಳಿದಾಸನ ಸುಪ್ರಸಿದ್ಧ ಸಂಸ್ಕೃತ ಕಾವ್ಯದ ಕನ್ನಡ ಅನುವಾದ....ಅನುವಾದವು ಕುಸುಮಷಟ್ಪದಿಯಲ್ಲಿದೆ; ಅಚ್ಚಕನ್ನಡದ ಹಾಡುವೃತ್ತ, ಮುತ್ತಿನಂಥ ಮಾತುಗಳು, ಆ ಮಾತುಗಳ ಹೊಂದಿಕೆಯಾದ ಜೋಡಣೆ—ಇವುಗಳಿಂದ ಕಾವ್ಯಕ್ಕೆ ಪ್ರಾಯಿಕವಾಗಿ ಒಂದು ಹೊಸ ಮೃದುತ್ವವೂ ಮಾಧುರ್ಯವೂ ಬಂದಿವೆ.—ಪ್ರಬುದ್ಧ ಕರ್ಣಾಟಕ.

ಸರಲತೆ, ಮಾಧುರ್ಯ, ವಿಶದತೆ— ಈ ಗುಣಗಳಿಂದ ಕಾವ್ಯವು ಮನೋಹರವಾಗಿದೆ.

—ಶ್ರೀಯುತ ಡಿ. ವಿ. ಗುಂಡಪ್ಪನವರು.

## ಜಿ. ಪಿ. ರಾಜರತ್ನರ

# ಗಂಡುಗೊಡಲಿ

ಕ್ರೌ. ಅ. ೩೨ ಪುಟಗಳು ಬೆಲೆ ೦—೪—೦

ಕೃತಯುಗದಲ್ಲಿ ಕ್ಷಾತ್ರಕುಲಜಲಧಿಯನ್ನು ಆಪೋಶನವನ್ನಾಗಿ ತೆಗೆದ ಕ್ರಾಂತಿಸಾಧನ ಹೆಗಲನ್ನೇರಿದ ಗಂಡುಗೊಡಲಿಯ ಕೂರಲಗು ಸಾರ್ಥಕವಾದ ಸಮಯದ ದರ್ಶನವಿದು.

"ಇಂದಿನ ಸುತ್ತುಮುತ್ತಣಕ್ಕೆ ಕೆರಳಿದ ಜೀವದ ಕಿಚ್ಚು ಇದರ ನುಡಿನುಡಿಯಲ್ಲಿ ಇಣಿಕುತ್ತಿದೆ. ಹೊರಗಣ ದಾಸ್ಯದುಃಖಗಳನ್ನು ಕಂಡು ತಾಳ್ಮೆಯಂಥ ತಾಳ್ಮೆಯು ಕೂಡ ಕ್ರಾಂತಿಕುಠಾರವನ್ನೆತ್ತಲು ಬಯಸುವದೆಂಬುದೇ ಆ ಕಿಚ್ಚು; ಪರಶುರಾಮನ ಕ್ರಾಂತಿಕಥೆಯೇ ಅದರ ಹೊರಪಾಟಕ್ಕೆ ಸರಿಯಾದ ಪಡಿಯಚ್ಚು........(ಈ ರೂಪಕದ) ಪ್ರತಿ ದೃಶ್ಯದಲ್ಲಿ, ಪ್ರತಿ ವಾಕ್ಯದಲ್ಲಿ ಎಂಥ ಬಲುಮೆಯಿದೆ! ಹೊಸ ಭಾವಗಳನ್ನು ತಂದಿರುವಲ್ಲಿ ಎಷ್ಟು ಹೊಂದಿಕೆ, ಹುರುಡು ಎದ್ದು ಕಾಣುತ್ತಿದೆ! ನಿಜವಾಗಿ ರಾಜರತ್ನರ ರೌದ್ರ ಪ್ರತಿಭೆಯು ಇಲ್ಲಿ, ಈ ಏಕಾಂಕದೃಶ್ಯದ ಗಂಡುಗೊಡಲಿಯ ಕೆನ್ನೀರು ಹಸಿಗಳ ಕೆಂಪಿನಲ್ಲಿ ಬೆರಗುಗೊಳಿಸುವಂತಹ ಕೆಲಸ ಮಾಡಿದೆ. ಇದಕ್ಕೆ ಯಾವ ಸಂಶಯವೂ ಇಲ್ಲ. ನೆನೆನೆನೆದು ಅಚ್ಚರಿಬಡುವಂಥ ಬಲ್ನುಡಿಗಳು, ಕಿರಿಮಾತುಗಳು ಎಷ್ಟೋ ಇಲ್ಲಿವೆ. ಅವೆಲ್ಲ ಅವರ ಒಳಗಿಚ್ಚಿನ ಸಾಕ್ಷಿಯಾಗಿ ಕವಿಯು ಗೈವ ಭಾವ ತಪಸ್ಸಿನ ಪ್ರತಿಫಲಗಳಾಗಿ ನಿಂತಿವೆ, ಕೊನೆವರೆಗೆ ನಿಲ್ಲುತ್ತವೆ."—ಜಯಕರ್ಣಾಟಕ.

## ಪಂಡಿತ ನರಸಿಂಹಶಾಸ್ತ್ರಿಗಳ

# ಸೊಹ್ರಾಬ್ ಮತ್ತು ರುಸ್ತುಂ

(ಪದ್ಯಕಾವ್ಯ)

ಪ್ರಕಾಶಕರು—ಎಸ್. ವೆಂಕಟಗಿರಿರಾವ್ ಮತ್ತು ಸೋದರರು, ತೀರ್ಥಹಳ್ಳಿ.

ಕ್ರೌ. ಅ. ೪+೪೪ ಪುಟಗಳು ಬೆಲೆ. ಸಾದಾ ಪ್ರತಿ ೦—೪—೦

ಬೆಂಡುಕಾಗದದ ಪ್ರತಿ ೦—೬—೦

---

**ಕರ್ಣಾಟಕ ಸಂಘ, ಶಿವಮೊಗ್ಗ.**

